ದುಷ್ಯಂತ ಯೋಚಿಸಿ ತಾನು ಆಶ್ರಮದ ರಕ್ಷಣೆಗಾಗಿ ಅಲ್ಲೇ ಉಳಿಯುವುದೆಂದೂ ವಿದೂಷಕ ತನ್ನನ್ನು ಪ್ರತಿನಿಧಿಸಲು ರಾಜಧಾನಿಗೆ ತೆರಳುವುದೆಂದೂ ನಿರ್ಧರಿಸುತ್ತಾನೆ. ವಿದೂಷಕ ಕೂಡಲೆ ಒಪ್ಪಿ ಹೊರಡಲು ಸಿದ್ಧನಾಗುತ್ತಾನೆ. ಅವನ ಸ್ವಭಾವವನ್ನು ಅರಿತ ರಾಜ ವಿದೂಷಕನನ್ನು ಓಲೈಸಿ ತಾನು ಆಡಿದ ಶಕುಂತಲೆಗೆ ಸಂಬಂಧಿಸಿದ ಮಾತೆಲ್ಲಾ ಪರಿಹಾಸಮಾತ್ರವೆಂದೂ ಅದನ್ನು ಪರಮಾರ್ಥವೆಂದು ಭಾವಿಸಕೂಡದೆಂದೂ ಹೇಳುತ್ತಾನೆ. ಅರಮನೆಗೆ ಹಿಂತಿರುಗಲು ಕಾತುರನಾಗಿದ್ದ ವಿದೂಷಕ ಅದನ್ನು ನಂಬಿ ಸಕಲ ಪರಿವಾರಸಮೇತನಾಗಿ 'ಯುವರಾಜ' ನಂತೆ ಬಿಜಯಂಗೈಯುತ್ತಾನೆ. ಆದುದರಿಂದ ಈ ಅಂಕವನ್ನು 'ವಿದೂಷಕವೈಭವ' ವೆಂದೂ 'ಮಾಧವ್ಯಾಮೋದ' ವೆಂದೂ ಕರೆದಿರುವುದು ಉಚಿತವಾಗಿದೆ.

(ಪುಟ 15)

विषण्ण:—ಖಿನ್ನನಾಗಿ ಉತ್ಸಾಹಗುಂದಿದವನಾಗಿ, वि + सद् + क्त. ಭೂತಕರ್ತರಿ ಕೃದಂತ.

भो दिष्टम्—'ಅಯ್ಯೋ ನನ್ನ ಅದೃಷ್ಟವೇ'. ತನ್ನ ದುರ್ದೈವವನ್ನು ನಿಂದಿಸುತ್ತಾನೆ. 'दैवं दिष्टं भागधेयं भाग्यं स्त्री नियतिर्विधिः' ಅಮರ.

मृगयाशीलस्य—ಬೇಟೆಯ ಗೀಳು ಹಿಡಿದಿರುವ. मृग्यन्ते पशवोऽस्याम् इति मृगया, मृगयां शीलयति असौ, तस्य.

वयस्यभावेन—ಸ್ನೇಹದಿಂದ. वयसा तुल्यः वयस्यः ಸ್ನೇಹಿತ. ಸಾಧಾರಣವಾಗಿ ರಾಜನೊಡನೆ ಅವನ ಸ್ನೇಹವಿದ್ದರೆ ಎಷ್ಟೋ ಸುಖ-ಭೋಗಗಳನ್ನು ಪಡೆದು ಆನಂದವಾಗಿರಬಹುದು. ಆದರೆ ರಾಜನೊಡನೆ ಅವನ ಸ್ನೇಹದಿಂದ ಈ ದುಃಸ್ಥಿತಿ ಒದಗಿರುವುದು ತನ್ನ ದುರ್ದೈವವೆಂದು ಅವನ ಅಭಿಪ್ರಾಯ.

निर्विण्णः—ನಿರುತ್ಸಾಹಗೊಂಡು ಜುಗುಪ್ಸೆಯಿಂದ ಕೂಡಿ.

वनराजिः—ಅರಣ್ಯಪಂಕ್ತಿ, ಕಾನನ ಶ್ರೇಣಿ. राजिः—ಸಾಲು, ಪಂಕ್ತಿ.

अटवीतोऽटवी—ಕಾಡಿನಿಂದ ಕಾಡಿಗೆ. तसिल् ಪ್ರತ್ಯಯದಿಂದ 'अटवीतः' ಎಂದಾಗಿದೆ. ಇದು ಪಂಚಮೀವಿಭಕ್ತಿಯನ್ನೊಳಗೊಂಡ ಅವ್ಯಯ.

आहिण्ड्यते—ಸುತ್ತಾಡಲ್ಪಡುತ್ತಲಿದೆ. हिण्ड् ಸುತ್ತಾಡು.

पत्रसङ्करकषायाणि—(ಉದುರಿದ) ಎಲೆಗಳು ಸೇರಿ ಒಗಚಾದ.

अनियतवेलं—ಹೊತ್ತು ಗೊತ್ತಿಲ್ಲದೆ. (ಕಾಲತಪ್ಪಿ).

शूल्यमांसभूयिष्ठः आहारः—ಶೂಲಗಳಿಗೆ ಸಿಕ್ಕಿಸಿ ಬೇಯಿಸಿದ ಮಾಂಸದ ಒರಟು ಆಹಾರ. भूयिष्ठः—ಬಹುಮಟ್ಟಿಗೆ.

कण्ठितसन्धेः—ಕೀಲು ಮುರಿದಿರುವ. मम ಎನ್ನುವುದಕ್ಕೆ ವಿಶೇಷಣ. 'ಹೊಟ್ಟೆನ್ನು ಕಾಳಿನಿಂದ ಬೇರ್ಪಡಿಸು' ಎನ್ನುವ ಅರ್ಥದಲ್ಲಿ कण्ठ् ಧಾತು ಉಪಯೋಗಿಸಲ್ಪಡುತ್ತದೆ. ಈಗ खण्ड् ಧಾತುವೇ ಹೆಚ್ಚು ಬಳಕೆಯಲ್ಲಿದೆ.

शकुनिकुलुब्धकैः—ಹಕ್ಕಿ ಗುಂಪನ್ನು ಹಿಡಿಯುವುದರಲ್ಲಿ ಪ್ರವೀಣರಾದ ಬೇಟೆಗಾರರು. ವಿದೂಷಕ, 'ಇವರಿಗೆ ದೊಡ್ಡ ಬೇಟೆ ಸಾಧ್ಯವಿಲ್ಲ' ಎಂದು ಮೂದಲಿಸುವ ಅರ್ಥದಲ್ಲೂ ಇದನ್ನು ಹೇಳಿರಬಹುದು.

महत्येव प्रत्यूषे—ಉಷಃಕಾಲದಲ್ಲಿಯೇ ತುಂಬ ಬೇಗಲೇ. 'प्रत्यूषोऽहर्मुखं कल्यमुषः प्रत्युषसी अपि। प्रभातं च'—ಅಮರ.

दास्याः पुत्रैः—ದಾಸೀಪುತ್ರರು. ನಿಂದಾರ್ಥ (ಅಲುಕ್ ಸಮಾಸ). ಏಕೆಂದರೆ ಎಲ್ಲ ಬೇಟೆಗಾರರೂ ದಾಸಿಯರ ಪುತ್ರರಲ್ಲ. ನಿಂದಾರ್ಥದಲ್ಲಿ ಮಾತ್ರ 'ಪುತ್ರ' ಎಂಬ ಪದ ಮುಂದೆ ಬಂದರೆ, ಈ ಷಷ್ಠೀವಿಭಕ್ತಿ ಪ್ರತ್ಯಯ ಉಳಿಯುತ್ತದೆ. ಇಲ್ಲದೆ ಇದ್ದಲ್ಲಿ ಷಷ್ಠೀ ವಿಭಕ್ತಿ ಉಳಿಯುವುದಿಲ್ಲ. (पुत्रेऽन्यतरस्याम्).

प्रतिबोधितोऽस्मि—ಎಚ್ಚರಗೊಳಿಸಲ್ಪಟ್ಟಿದ್ದೇನೆ. प्रति + बुध + णिजन्त, 'ಹಗಲೆಲ್ಲಾ ಸುತ್ತಿ, ಪರದಾಡಿ ಆಯಾಸಗೊಂಡಿದ್ದು ರಾತ್ರಿಯಾದರೂ ಕಣ್ತುಂಬ ನಿದ್ದೆ ಮಾಡೋಣವೆಂದರೆ ಅದಕ್ಕೂ ಈ ಹಾಳು ಬೇಟೆಗಾರರ ಕಾಟ. ಬಂದು ಬೇಗ ಎಚ್ಚರಗೊಳಿಸಿ ಹಿಂಸೆಮಾಡಿದ್ದಾರೆ' ಎಂದು ವಿದೂಷಕ ದೂರಿಡುತ್ತಾನೆ.

इयता न निष्क्रामति—ಇಷ್ಟಕ್ಕೇ ನನ್ನ ಸಂಕಟ ಪೂರೈಸಲಿಲ್ಲ. 'ಇನ್ನೊಂದು ಸಂಕಟ ಸ್ಥಿತಿಯನ್ನು ಎದುರಿಸಬೇಕಾಗಿದೆ' ಎನ್ನುವ ಅರ್ಥ.

ततो गण्डस्योपरि पिण्डकः संवृत्तः—'ಬಾವಿನ ಮೇಲೆ ಬರೆ ಎಳೆದಂತೆ', 'ಬೊಕ್ಕೆ ಮೇಲೆ ಕುರು ಎದ್ದಂತೆ' ಆಗಿದೆ. ಇಂದೋ ನಾಳೆಯೋ ಬೇಟೆಯ ಚಟ ತೀರಿ ದುಷ್ಯಂತ ಮಹಾರಾಜ ರಾಜಧಾನಿಗೆ ಹಿಂತಿರುಗಬಹುದೆಂದು ಹೇಗೋ ಕಾಲ ತಳ್ಳುತ್ತಿದ್ದ ವಿದೂಷಕನಿಗೆ ಈಗ ಹೊಸದೊಂದು 'ಕಷ್ಟಪರಿಸ್ಥಿತಿ' ಒದಗಿದೆ. ದುಷ್ಯಂತ ಶಕುಂತಲೆಯಲ್ಲಿ ಅನುರಕ್ತನಾಗಿದ್ದು ರಾಜಧಾನಿಗೆ ಹಿಂತಿರುಗಿರುವ ಅಭಿಪ್ರಾಯವನ್ನೇ ಮರೆತಿದ್ದಾನೆ. ಜ್ಞಾಪಿಸಿದರೂ ಅದು ಅವನಿಗೆ ಹಿಡಿಸದು.

अस्मास्ववहीनेषु—(ಸೈನ್ಯ-ಪರಿವಾರ) ನಾವು ಹಿಂದೆ ಉಳಿದಾಗ.

कृताचारपरिकर्माणम्—ತನ್ನ ನಿತ್ಯವಿಧಿ ಮತ್ತು ಅಲಂಕಾರವನ್ನು ಮುಗಿಸಿರುವ. कृतः आचारः, कृतं परिकर्म च येन सः—कृताचारपरिकर्मा, तम्. 'परिकर्माङ्गसंस्कारः'।

एष बाणासनहस्ताभिः ಇತ್ಯಾದಿ—ಕಾಡು ಪುಷ್ಪಗಳ ಮಾಲೆ ಧರಿಸಿ ಕೈನಲ್ಲಿ ಧನುಸ್ಸನ್ನು ಹಿಡಿದಿರುವ ಯವನ ಸ್ತ್ರೀಯರಿಂದ ಕೂಡಿ. बाणासन = ಧನುಸ್ಸು, बाणानां आसनं ಅಥವಾ बाणाः अस्यन्ते अस्मात् ।

अङ्गभङ्गविकल इव—(ಶರೀರದ ಕೈ-ಕಾಲು ಶಿಥಿಲಗೊಂಡು) ಅಂಗವಿಹೀನನಂತೆ.

दण्डकाष्टं (यष्टिः) ಒಂದು ಮರದ ಕೋಲು.

ಪದ್ಯ 1 (ಅನ್ವಯ) प्रिया न सुलभा (इति) कामं; मनस्तु तद्भावदर्शनाश्वासि । मनसिजे अकृतार्थेऽपि उभयप्रार्थना रतिं कुरुते ॥

ಈ ಶ್ಲೋಕದಲ್ಲಿ ರಾಜನ ಮನೋವ್ಯಥೆ ವರ್ಣಿತವಾಗಿದೆ—

'ಪ್ರಿಯತಮೆ ಶಕುಂತಲೆಯನ್ನು ಪಡೆಯುವುದು ಸುಲಭವಲ್ಲ; ಆದರೆ ಅವಳು ನನ್ನಲ್ಲಿ ತೋರುತ್ತಿರುವ ಹಾವ ಭಾವಗಳನ್ನು ಕಂಡಾಗ ನನ್ನ ಹೃದಯ ವಿಶ್ವಾಸ ಗೊಳ್ಳುತ್ತದೆ. ಮನ್ಮಥ ಪ್ರೇಮಿಗಳಲ್ಲಿ ಸಮಾಗಮವನ್ನು ತರುವುದರಲ್ಲಿ ಕೃತಾರ್ಥ ನಾಗದಿದ್ದರೂ, ಆ ಪ್ರೇಮಿಗಳ ತೀವ್ರ ಆಕಾಂಕ್ಷೆಯೇ ಅವರಲ್ಲಿ ಆನಂದವನ್ನು ತರುತ್ತದೆ.'

ಈ ಶ್ಲೋಕದಲ್ಲಿರುವ ಪ್ರೇಮಸಿದ್ಧಾಂತವನ್ನೇ 'ಮಾಲವಿಕಾಗ್ನಿಮಿತ್ರ'ದಲ್ಲಿ ಅಗ್ನಿಮಿತ್ರನೂ ವ್ಯಕ್ತಪಡಿಸಿದ್ದಾನೆ अनातुरोत्कण्ठितयोः प्रसिद्धयता समागमेनापि रतिर्न मां प्रति । परस्परप्राप्तिनिराशयोर्वरं शरीरनाशोऽपि समानुरागयोः ॥

कामं—ಒಪ್ಪಿಗೆಯನ್ನು ಸೂಚಿಸುತ್ತದೆ.

मनस्तु तद्भावदर्शनाश्वासि—ಮನಸ್ಸು ಅವಳ ಹಾವ-ಭಾವಗಳನ್ನು ಕಂಡು ಧೈರ್ಯಗೊಳ್ಳುತ್ತದೆ. ದುಷ್ಯಂತನ ಯೋಚನೆ 'ಶಕುಂತಲೆಯೂ ತನ್ನಲ್ಲಿ ಅನುರಾಗ ತೋರುತ್ತಿರುವುದರಿಂದ ಅವಳ ಸಾಕು-ತಂದೆ ಕಾಶ್ಯಪರು ನಮ್ಮಿಬ್ಬರ ವಿವಾಹಕ್ಕೆ ಒಪ್ಪಬಹುದು' ಎಂದು.

अकृतार्थेऽपि मनसिजे—'ಮನ್ಮಥ ತನ್ನ ಉದ್ದೇಶದಲ್ಲಿ ಸಫಲನಾಗದಿದ್ದರೂ' ಅಂದರೆ, ಪ್ರೇಮಿಗಳ ಸಮಾಗಮವನ್ನು ತರಲು ಸಾಧ್ಯವಾಗದಿದ್ದರೂ.

मनसिजः = ಮನ್ಮಥ मनसि जायते इति.

उभयप्रार्थना रतिं कुरुते—ಪ್ರೇಮಿಗಳು ವ್ಯಕ್ತಪಡಿಸುವ ತೀವ್ರ ಅನುರಾಗವು ಆಪ್ಯಾಯನವನ್ನುಂಟುಮಾಡುತ್ತದೆ. ಅಂದರೆ ಶಾರೀರಕಮಿಲನವಾಗದಿರಬಹುದು; 'ಹೃದಯ ಸಂವಾದ' ವಿದೆಯೆಂದು ದೃಢವಾದರೂ ಅದೂ ಆನಂದದಾಯಕವೇ.

स्मितं कृत्वा — ಮುಗುಳ್ನಕ್ಕು. ಈ ಮುಗುಳ್ನಗು ಅರ್ಥಪೂರ್ಣವಾದುದು. ಶಕುಂತಲೆಯ ಹಾವ-ಭಾವಗಳನ್ನೆಲ್ಲಾ ತನಗೇ ಅನ್ವಯಮಾಡಿಕೊಂಡು ಅವಳಿಗೆ ತನ್ನಲ್ಲಿ ಅನುರಾಗವಿದೆ ಎಂದು ಭಾವಿಸಿರುವ (ಯಥಾರ್ಥ ಹೌದೋ ಅಲ್ಲವೊ ವಿಮರ್ಶಿಸದೆ) ರಾಜನಿಗೆ ತನ್ನನ್ನು ಕಂಡು ತನಗೇ ನಗುಬರುತ್ತಿದೆ.

विडम्ब्यते—ಅಪಹಾಸ್ಯ ಮಾಡಲ್ಪಡುತ್ತಾನೆ.

(ಪುಟ 16)

ಪದ್ಯ 2 (ಅನ್ವಯ) नयने अन्यतोऽपि प्रेरयन्त्या तया स्निग्धं वीक्षितं (इति) यत्, नितम्बयोः गुरुतया विलासादिव मन्दं तया यातं (इति) यत्, 'मा गा' इति उपरुद्धयापि तया सखी सासूयं उक्ता इति यत्, तत् सर्वं मत्परायणं किल; अहो कामी स्वतां पश्यति ॥

ಶಕುಂತಲೆಯ ಚರ್ಯೆಗಳನ್ನೆಲ್ಲಾ ತನ್ನ ಪರವಾಗಿ ಎಂದು ಭಾವಿಸಿಕೊಂಡ ದುಷ್ಯಂತನು ಹೇಳುವ ಮಾತಿದು.

ಅವಳ ಸ್ನಿಗ್ಧವೀಕ್ಷಣೆ, ಮಂದಗಮನ, ಸೇರ್ಷ್ಯವಚನ—ಎಲ್ಲವೂ ನನ್ನ ಪರವಾಗಿಯೇ ; ಆದರೂ ಇದು ಭ್ರಮೆಯಿರಬಹುದು ; ಏಕೆಂದರೆ ಕಾಮಿ, ಆ ಹಾವಭಾವಗಳನ್ನೆಲ್ಲಾ ತನ್ನಲ್ಲಿ ಅವಳ ಅನುರಾಗದ ಸೂಚನೆಗಳೆಂದೇ ಭಾವಿಸುತ್ತಾನೆ.

उपरुद्धया—ತಡೆಯಲ್ಪಟ್ಟ.

सर्वं तत् किल....' ಆ ಹಾವ-ಭಾವಗಳೆಲ್ಲ ನನ್ನಲ್ಲಿ ಅವಳು ವ್ಯಕ್ತಪಡಿಸುತ್ತಲಿರುವ ಅನುರಾಗವೇ.'

अहो कामी स्वतां पश्यति—ಕಾಮಿಯು ಆತ್ಮೀಯತೆಯನ್ನೇ ಕಾಣುತ್ತಾನೆ. स्वतां=स्वकीयतां ಅಥವಾ आत्मीयतां. ವ್ಯಾಖ್ಯಾನಕಾರರು स्वतां पश्यति ಎಂಬುದಕ್ಕೆ 'आत्मविषयत्वारोप इति मन्तव्यं' ಎಂದು ತಿಳಿಸಿದ್ದಾರೆ.

न मे हस्तपादं प्रसरति—ನನ್ನ ಕೈಕಾಲುಗಳು ಚಲಿಸುವಂತಿಲ್ಲ. ಅಂದರೆ ವಿದೂಷಕ, ' ನಾನು ನಿನ್ನ ಬಳಿಗೆ ಬಂದು ಕೈ ಎತ್ತಿ ಆಶೀರ್ವದಿಸಿ ಶುಭಕೋರಲು ಅಸಮರ್ಥನಾಗಿದ್ದೇನೆ, ಆದುದರಿಂದ ದೂರದಿಂದಲೇ 'ಜಯಶಾಲಿಯಾಗು' ಅಥವಾ 'ವಿಜಯೀಭವ' ಎನ್ನುತ್ತೇನೆ, ಏನೂ ಭಾವಿಸಬೇಡ ಎಂದು ಹೇಳುತ್ತಾನೆ. हस्तौ च पादौ च तेषां समाहारः=हस्तपादं (ಸಮಾಹಾರ ದ್ವಂದ್ವಸಮಾಸ).

जाप्यसे—' ಜಯಶೀಲನಾಗು ' ಎಂದು ಆಶೀರ್ವದಿಸಲ್ಪಡುತ್ತಿದ್ದೀಯೆ. ಗೆಲ್ಲು ಎನ್ನುವ ಅರ್ಥಕೊಡುವ जि ಧಾತುವಿನ ಪ್ರೇರಣಾರ್ಥಕದ, ಕರ್ಮಣಿ ಮ. ಪು. ಏ. ರೂಪ. ' ವಿಜಯಿಯಾಗು ' ಅಥವಾ ' ಜಯಶೀಲನಾಗು ' ಎನ್ನುವುದು ಒಂದು ಸಾಂಪ್ರದಾಯಿಕ ಹರಕೆ. ಆದರೆ ಪ್ರಕೃತ ಸಂದರ್ಭದಲ್ಲಿ ಶಕುಂತಲೆಯನ್ನು ಪಡೆಯಲಿರುವ ರಾಜನ ವಿಚಾರದಲ್ಲಿ ಇದು ವಿಶೇಷ ಅರ್ಥದಿಂದ ಕೂಡಿದೆ.

गात्रोपघातः—ಅಂಗವಿಕಲತೆ : गात्राणां उपघातः

कुतः किल स्वयं अक्षिणी....इत्यादि : ' ನೀನೇ, ಕಣ್ಣನ್ನು ತಿವಿದು ನೋವಿನ ಕಾರಣವನ್ನೂ ನೀನೇ ಕೇಳುತ್ತಿದ್ದೀಯಲ್ಲ '. ಅಂದರೆ ನನ್ನ ಕಷ್ಟಕ್ಕೆಲ್ಲಾ ನೀನೇ ಕಾರಣ, ಮತ್ತೆ ನೀನೇ ಏನೂ ತಿಳಿಯದವನಂತೆ ಯಾರಿಂದ ಕಷ್ಟ ಬಂತು ಎಂದು ಕೇಳುತ್ತಿದ್ದೀಯಲ್ಲ, ಇದು ಸರಿಯೆ ? ಎನ್ನುವ ಭಾವ.

यद्वेतसः कुब्जलीलां इत्यादि—' ವೇತಸವು ಕುಬ್ಜದ ಅನುಕರಣೆ ಮಾಡಿದರೆ ಅದು ವೇತಸದ ತಪ್ಪೋ ಅಥವಾ ನದೀ ಪ್ರವಾಹದ ತಪ್ಪೋ ?' ವಿದೂಷಕ ಸ್ವತಃ ಕುಬ್ಜನೇ. ಅವನು ಕೊಟ್ಟಿರುವ ಉಪಮಾನ ನಗು ತರಿಸುತ್ತದೆ.

श्वापदानुसमुत्सारण—ಬೇಟೆನಾಯಿಗಳ ಹೆಜ್ಜೆಯನ್ನನುಸರಿಸಿ ವನ್ಯ ಮೃಗಗಳನ್ನು ಅಟ್ಟಿಸಿಕೊಂಡು ಹೋಗುವುದು (ಬೇಟೆ).

मृगायविक्लवम्—ಬೇಟೆಯ ವಿಚಾರದಲ್ಲಿ ಬೇಸರ. (मृगयापराङ्मुखम्)

ಪದ್ಯ 3 (ಅನ್ವಯ) सहवसतिमुपेत्य यैः प्रियायाः मुग्धविलोकितोपदेशः। कृतः इव (तेषु) मृगेषु अधिज्यं आहितसायकं इदं धनुः नमयितुं न शक्तः (अस्मि)।

'ನನ್ನ ಪ್ರಿಯತಮೆಯ ಸಹವಾಸಿಗಳಾಗಿ ಅವಳಿಗೆ 'ಮಧುರ' ಮುಗ್ಧೇಕ್ಷಣವನ್ನು ಕಲ್ಪಿಸಿರುವ ಈ ಜಿಂಕೆಗಳ ಮೇಲೆ ಬಾಣ ಹೊಡೆಯಲು ನನಗೆ ಮನಸ್ಸಿಲ್ಲ.'

सहवसतिमुपेत्य....ಇತ್ಯಾದಿ—ರಾಜನಿಗೆ ಜಿಂಕೆಗಳ ವಿಚಾರದಲ್ಲಿಯೂ ಅನುಕಂಪ ಮೂಡಿದೆ. ಕಾರಣ ಅವು ತನ್ನ ಪ್ರಿಯೆಯ ಸಹವಾಸಿಗಳೆಂದು, ಜೊತೆಗೆ ಅವು ತನ್ನ ಪ್ರಿಯೆಗೆ ಮುಗ್ಧನೋಟದ ಉಪದೇಶಕರೆಂದೂ. ಮಧುರ ಪ್ರೇಮ ರಾಜನ ಹೃದಯವನ್ನು ಮೃದುಗೊಳಿಸಿ ಪ್ರಿಯತಮೆಯ ಒಡನಾಡಿಗಳಾದ ಜಿಂಕೆಗಳಲ್ಲೂ ಪ್ರೀತಿ, ಅನುಕಂಪ ತೋರುವಂತೆ ಮಾಡಿದೆ.

अधिज्यं ಮತ್ತು आहितसायक—ಹೆದೆ ಬಿಗಿದಿರುವ ಮತ್ತು ಬಾಣನೆಟ್ಟಿರುವ (ಧನುಃ ಎನ್ನುವುದಕ್ಕೆ ಗುಣವಾಚಕಗಳು).

अरण्ये मया रुदितमासीत्—'ನಾನು ಹೇಳಿದ್ದೆಲ್ಲಾ ಕೇವಲ ಅರಣ್ಯರೋದನವಾಯಿತು.' ಎಷ್ಟು ಹೇಳಿದರೂ ಕೇಳಿಸಿಕೊಳ್ಳದೆ ಉದಾಸೀನನಾಗಿದ್ದೀಯೆ ಎನ್ನುವ ಅರ್ಥ. 'अरण्यरोदन' ಒಂದು ಗಾದೆಯಾಗಿದೆ.

अनायासे कर्मणि ಇತ್ಯಾದಿ—(ನಿನಗೆ) ಅಷ್ಟು ಶ್ರಮವಾಗದ ಒಂದು ಕೆಲಸದಲ್ಲಿ ನೀನು ನನಗೆ ಸಹಾಯಕನಾಗಬೇಕು. ವಿದೂಷಕನಿಗೆ ಮೊದಲೇ ಆಯಾಸವಾಗಿ ದೂರಿಟ್ಟಿದ್ದಾನೆ. ಆದುದರಿಂದ ರಾಜನು ಈ ಪೀಠಿಕೆ ಹಾಕುತ್ತಾನೆ.

सहायः—'ಸಹಾಯಕ'.

किं मोदकखादिकायाम् ಏನು ? 'ಸಿಹಿ ತಿಂಡಿ-ತೀರ್ಥದ ವಿಷಯದಲ್ಲೇ ?' ದುಷ್ಯಂತನ ಯೋಚನೆಯೆಲ್ಲಾ ಶಕುಂತಲೆಯ ಮೇಲೆ; ಆದರೆ ವಿದೂಷಕನ ಯೋಚನೆಯೆಲ್ಲಾ ಊಟ, ತಿಂಡಿಯ ಮೇಲೆ. ಇಂತಹ ಸಂದರ್ಭವೇ 'ವಿಕ್ರಮೋರ್ವಶೀಯ'ದಲ್ಲೂ ಬರುತ್ತದೆ.

सुगृहीतः क्षणः—ಆಗಲಿ, ಒಪ್ಪಿದೆ ನಿನ್ನ ಆಮಂತ್ರಣವನ್ನು. ಈಗಲೇ ಸಿದ್ಧ. [ಸಂಸ್ಕೃತದ ಒಂದು ನುಡಿಕಟ್ಟು]

दौवारिकः—द्वारपालकः—ಬಾಗಿಲು ಕಾಯುವವ.

दृष्टदोषापि स्वामिनि—ಸೇನಾಪತಿಯ ಅರ್ಥ—ಕೆಲವರು ಬೇಟೆಯನ್ನು ಕ್ರೌರ್ಯದಿಂದ ಕೂಡಿರುವ ಒಂದು ಗೀಳು, ದೋಷ ಎಂದು ಭಾವಿಸುತ್ತಾರೆ. ಆದರೆ ನಮ್ಮ ಪ್ರಭುವಿನ ವಿಷಯದಲ್ಲಿ ಅದು ದೋಷವಲ್ಲ. ಗುಣವಾಗಿದೆ. ವನಗಜದ ಶರೀರದಂತೆ ಸತ್ವಪೂರ್ಣ ಶರೀರವನ್ನು ಅವನು ಪಡೆದಿರುವುದೇ ಇದಕ್ಕೆ ಸಾಕ್ಷಿ.

गुण एव संवृत्ता—ಶಕುಂತಲೆಯನ್ನು ಪಡೆಯಲಿರುವ ರಾಜನಿಗೆ ಬೇಟೆಯು ಗುಣ

ವಾಯಿತೆಂಬ ವಿಚಾರ ಅವನಿಗೇ ಅರಿವಿಲ್ಲದಂತೆ ಸೇನಾಪತಿಯು ಈ ಮಾತಿನಲ್ಲಿ ಸೂಚಿತವಾಗಿದೆ.

ಪದ್ಯ 4 (ಅನ್ವಯ) महिषाः शृङ्गैः मुहुः ताडितं निपानसलिलं गाहन्ताम्; छायाबद्धकदम्बकं मृगकुलं रोमन्थं अभ्यस्यतु। पल्वले वराहततिभिः मुस्ताक्षतिः विश्रब्धं क्रियताम्, इदं अस्मद्धनुः शिथिलज्याबन्धं विश्रामं लभताम् ॥

ರಾಜನು ಬೇಟೆಯನ್ನು ನಿಲ್ಲಿಸಬೇಕೆಂದು ಘೋಷಿಸುತ್ತಾನೆ. 'ಕಾಡು ಕೋಣಗಳು ಗೂಟಾಡಿಕೊಂಡು ನಿರ್ಭಯವಾಗಿ ಜಲಾಶಯಗಳಲ್ಲಿ ಮುಳುಗಿ ಏಳಲಿ; ಜಿಂಕೆಗಳು ಹಿಂಡುಹಿಂಡಾಗಿ ಮರದ ನೆರಳಿನಲ್ಲಿ ನಿರಾತಂಕವಾಗಿ ಮಲಗಿ ಮೆಲಕು ಹಾಕಲಿ; ಕಾಡು ಹಂದಿಗಳು ಸ್ವೇಚ್ಛೆಯಾಗಿ ಸರೋವರಗಳಲ್ಲಿ ತಮಗೆ ಪ್ರಿಯವಾದ ಹುಲ್ಲನ್ನು ಜಗಿಯುತ್ತಲಿರಲಿ; ಹೆದೆ ಸಡಿಲಮಾಡಲ್ಪಟ್ಟ ನಮ್ಮ ಈ ಧನುಸ್ಸು ವಿಶ್ರಾಂತಿ ಪಡೆಯಲಿ.'

कदम्बकम्—ಹಿಂಡು-ಹಿಂಡಾಗಿ

रोमन्थम्—ಮೆಲುಕು ಹಾಕುವುದು

पल्वलं—ಸರೋವರ

मुस्ताक्षतिः—'ಮುಸ್ತ' ಎಂಬ ಒಂದು ಜಾತಿಯ ಹುಲ್ಲು. ಅದನ್ನು ಜಗಿಯುವುದು.

मुहुः अभ्यस्यतु—विश्रब्धं ಈ ಪದಗಳು ನಿರ್ಭಯವಾಗಿ ಎನ್ನುವುದನ್ನು ಸೂಚಿಸುತ್ತವೆ.

ಈ ಶ್ಲೋಕದಲ್ಲಿನ ಪದಬಂಧ ಮಧುರವಾಗಿದೆ. ವಾಮನನೇ ಮುಂತಾದ ಆಲಂಕಾರಿಕರು ವೈದರ್ಭೀ ರೀತಿಗೆ ನಿದರ್ಶನವಾಗಿ ಈ ಶ್ಲೋಕವನ್ನು ಉದಾಹರಿಸಿದ್ದಾರೆ.

(ಪುಟ 18)

यत् प्रभविष्णवे रोचते— ರುಚ್ಯರ್ಥಕ ಧಾತುಗಳ ಯೋಗವಿದ್ದಲ್ಲಿ ಯಾರಿಗೆ ರುಚಿಸುತ್ತದೆಯೋ ಅವರನ್ನು ಸೂಚಿಸುವ ಪದ ಚತುರ್ಥೀ ವಿಭಕ್ತಿಯಲ್ಲಿ ಇರುತ್ತದೆ. ಆದುದರಿಂದ 'प्रभविष्णवे' ಎಂದು ಚತುರ್ಥೀ ಬಂದಿದೆ. रुच्यर्थानां प्रीयमाणः ವೃದ್ಧಿಶಾಲಿಯಾದ ಪ್ರಭುವಿನ ಇಷ್ಟದಂತೆ.

अपनयन्तु भवत्यः.... ಇತ್ಯಾದಿ—'ಹೋಗಿ, ನೀವಿನ್ನು ಬೇಟೆಯ ಉಡುಪನ್ನು ತೆಗೆದು ಹಾಕಿ. ರಾಜನು ವಿದೂಷಕನೊಡನೆ ಶಕುಂತಲೆಯ ವಿಚಾರವನ್ನು ಗೋಪ್ಯವಾಗಿ ಮಾತನಾಡಬಯಸುತ್ತಾನೆ. ಆದುದರಿಂದ ತನ್ನ ಪರಿವಾರದವರನ್ನು ಅಲ್ಲಿಂದ ಕಳಿಸಲು ಈ ರೀತಿ ಹೇಳುತ್ತಾನೆ.

माधव्य अनवाप्तचक्षुः फलोऽसि—'ಮಾಧವ್ಯ, ನಿನ್ನ ಕಣ್ಣುಗಳಿದ್ದೂ ನಿರರ್ಥಕ. ಏಕೆಂದರೆ ಅದರ ಫಲವನ್ನು ನೀನು ಅನುಭವಿಸಿಲ್ಲ' ಈ ರೀತಿ ಶಕುಂತಲೆಯ ವಿಚಾರದ ಪ್ರಸ್ತಾಪಕ್ಕೆ ರಾಜ ಪೀಠಿಕೆ ಹಾಕುತ್ತಾನೆ. ಶಕುಂತಲೆಯಂತಹ ಅನುಪಮ ಸೌಂದರ್ಯರಾಶಿಯನ್ನು ನೋಡದ ಮೇಲೆ ಕಣ್ಣಿದ್ದರೂ ನಿಷ್ಫಲವೆಂದೇ ರಾಜನ ಭಾವ.

ननु भवान्....ಮುಂತಾಗಿ—ನೀನೇ ಎದುರಿನಲ್ಲಿರುವೆ. ನಿನ್ನ ರೂಪವನ್ನು ನೋಡಿ ನನ್ನ ಕಣ್ಣು ಸಾರ್ಥಕವಾಗಿದೆ. ಅಪ್ರಯತ್ನವಾಗಿ ಕವಿ ಎಂತಹ ಪರಿಣಾಮವನ್ನು ತರಬಲ್ಲ ಎಂಬುದಕ್ಕೆ ಇದೊಂದು ನಿದರ್ಶನ.

सर्वः कान्तमात्मीयं पश्यति—ಎಲ್ಲರೂ ತಮ್ಮ ತಮ್ಮವರನ್ನು ಸುಂದರವಾಗಿದ್ದಾರೆಂದೇ ಭಾವಿಸುತ್ತಾರೆ. आत्मीयम्—ತಮ್ಮವರನ್ನು कान्तं—ಮನೋಹರ. (ಅರ್ಥಾಂತರನ್ಯಾಸ).

भो वयस्य, ते तापसकन्यका अभ्यर्थनीया दृश्यते—'ಮಿತ್ರ ನೀನು ತಾಪಸ ಕನ್ಯೆಯನ್ನು ಅಪೇಕ್ಷಿಸುವಂತೆ ಕಾಣುತ್ತಿರುವುದಲ್ಲಾ! "ತಾಪಸ ಕನ್ಯೆಯನ್ನು ರಾಜನು ಪಾಣಿಗ್ರಹಣ ಮಾಡಿಕೊಳ್ಳುವುದು "ಪ್ರತಿಲೋಮ"ವೆನಿಸಿ ಧರ್ಮ ವಿರುದ್ಧವಾಗುತ್ತದೆ. ವಿದೂಷಕನ ಈ ಆಕ್ಷೇಪಣೆ, ರಾಜನಲ್ಲಿದ್ದ ಧರ್ಮದೃಷ್ಟಿಯನ್ನು ಮರೆಸಲು ಸಹಾಯಕವಾಗಿದೆ.

न परिहार्ये वस्तुनि पौरवाणां मनः प्रवर्तते—"ಪುರುವಂಶಲಲಾಮರ ಮನಸ್ಸು ಧರ್ಮದ ಪ್ರಕಾರ ನಿಷಿದ್ಧವೆನಿಸಿದ ವಸ್ತುಗಳಲ್ಲಿ ಎಂದಿಗೂ ತೊಡಗುವುದಿಲ್ಲ." ದುಷ್ಯಂತನು ತನ್ನ ವಂಶದಲ್ಲಿ ಉಜ್ವಲ ಅಭಿಮಾನವನ್ನು ಜೊತೆಗೆ ತನ್ನಲ್ಲಿರುವ ಧರ್ಮಾಧರ್ಮವಿವೇಕವನ್ನೂ ಈ ಮಾತಿನಲ್ಲಿ ಸ್ಪಷ್ಟಗೊಳಿಸಿದ್ದಾನೆ. ಪ್ರಥಮಾಂಕದಲ್ಲಿ ತಾಪಸ ಕನ್ಯೆ ಶಕುಂತಲೆಯಲ್ಲಿ ಅವನಿಗೆ ಅನುರಾಗ ಮೂಡಿದಾಗಲೇ ಅವನ ಯುಕ್ತಾಯುಕ್ತ ವಿವೇಚನೆಯನ್ನು ಎತ್ತಿ ಹಿಡಿದಿರುವ 'असंशयं क्षत्रपरिग्रहक्षमा' ಎಂಬ ಶ್ಲೋಕವನ್ನು ಗಮನಿಸಿ.

यथा कस्यापि पिण्डखर्जूरोद्वेजितस्य .... ಇತ್ಯಾದಿ — 'ಖರ್ಜೂರ ಬೇಸರವಾಗಿ ಹುಣಿಸೆ ಹಣ್ಣನ್ನು (ತಿನ್ನಲು) ಆಸೆಪಟ್ಟವನಂತೆ' ಅಂತಃಪುರದ ಲಾವಣ್ಯ ತಾರುಣ್ಯಮಯಿಯರಾದ ಲಲನೆಯರ ವಿಷಯದಲ್ಲಿ ಬೇಸರಿಕೆಪಟ್ಟು ಆಶ್ರಮ ಕನ್ಯೆಯಲ್ಲಿ ಮೋಹಗೊಂಡಿರುವ ರಾಜನ ಪರಿಸ್ಥಿತಿ ವಿದೂಷಕನಿಗೆ ಆಶ್ಚರ್ಯಕರವಾಗಿದೆ.

तिन्त्रिणी = ಹುಣಿಸೆಹಣ್ಣು.

(ಪುಟ 19)

तत्खलु रमणीयं यद्भवतोऽपि विस्मयमुत्पादयति—ಯಾವುದು ನಿನ್ನಂತಹವನಿಗೇ ವಿಸ್ಮಯವನ್ನುಂಟು ಮಾಡುತ್ತಿರುವುದೋ ಅದನ್ನೇ ರಮಣೀಯವೆಂದು ಹೇಳು

ವುದು. ನೀನು ಮೆಚ್ಚಿದ ಮೇಲೆ ಅವಳು ಚೆಲುವೆಯೇ ಸರಿ—ಎಂಬುದು ಭಾವಾರ್ಥ. ರಾಜನು ಉತ್ತಮರುಚಿಯ ಉಪಾಸಕನೆಂದು ವಿದೂಷಕನಿಗೆ ಗೊತ್ತಿದೆ.

ಪದ್ಯ-5 (ಅನ್ವಯ)—[सा] विधिना चित्रे निवेश्य परिकल्पितसत्त्वयोगा नु; मनसा रूपोच्चयेन कृता नु। धातुः विभुत्वं तस्याः वपुश्च अनुविचिन्त्य [स्थितस्य] मे सा अपरा स्त्रीरत्नसृष्टिः (इति) प्रतिभाति ॥

'ಸೃಷ್ಟಿಕರ್ತನ ಸಾಮರ್ಥ್ಯವನ್ನೂ ಅವಳ ಅನುಪಮ ಶರೀರಲಾವಣ್ಯವನ್ನೂ ನೋಡಿ ನೋಡಿ ವಿಸ್ಮಯಗೊಂಡಿರುವ ನನಗೆ—'ಚಿತ್ರದಲ್ಲಿ ರೂಪಿಸಲ್ಪಟ್ಟು ನಂತರ ಜೀವವನ್ನು ಪಡೆಯುವಂತೆ ಅವಳೇನಾದರೂ ಮಾಡಲ್ಪಟ್ಟಿರಬಹುದೇ ಅಥವಾ ಜಗತ್ತಿನ ಲಾವಣ್ಯರಾಶಿಯಿಂದ ಅವಳು ಸೃಷ್ಟಿಸಲ್ಪಟ್ಟಿರಬಹುದೇ' ಎಂಬ ಶಂಕೆ ಉದ್ಭವಿಸಿದೆ. ಒಟ್ಟಿನಲ್ಲಿ ಅವಳು, ಅದ್ವಿತೀಯ ಸ್ತ್ರೀರತ್ನ.'

विभुत्वम्—ನಿರ್ಮಾಣ ಸಾಮರ್ಥ್ಯದ ಇತಿಮಿತಿಯನ್ನು.

चित्रे निवेश्य....ಇತ್ಯಾದಿ—ಯಾವುದೇ ವಸ್ತುವನ್ನಾಗಲೀ ಮೊದಲು ಚಿತ್ರದಲ್ಲಿ ರೂಪಿಸಿಕೊಂಡರೆ ಪರಿಪೂರ್ಣತೆ ಮತ್ತು ತೃಪ್ತಿಯನ್ನು ತರುವವರೆಗೂ ಆ ಚಿತ್ರವನ್ನು ಉತ್ತಮಗೊಳಿಸುವುದು ಸಾಧ್ಯ. ಆದುದರಿಂದ ಸಂಪೂರ್ಣಗೊಳಿಸಿ ಪರಿಪೂರ್ಣ ಲಾವಣ್ಯವೆಂದು ಭಾವಿಸಿದ ಮೇಲೆ ಆ ಚಿತ್ರಕ್ಕೆ ಸೃಷ್ಟಿಕರ್ತನು ಪ್ರಾಣಯೋಗ ಮಾಡಿರಬಹುದೇ ಎಂದು ದುಷ್ಯಂತನ ಮೊದಲ ವಿಕಲ್ಪ.

रूपोच्चयेन विधिना....ಇತ್ಯಾದಿ—ಏಕತ್ರ ಸಂಗ್ರಹಿಸಿದ ತ್ರಿಲೋಕ ಸೌಂದರ್ಯವನ್ನು ಉಪಯೋಗಿಸಿಕೊಂಡು ಬ್ರಹ್ಮನು ತನ್ನ ಮಾನಸಶಕ್ತಿಯಿಂದಲೇ ಇವಳನ್ನು ನಿರ್ಮಿಸಿರಬಹುದೇ ಎಂಬುದು ಎರಡನೆಯ ವಿಕಲ್ಪ. ಏಕೆಂದರೆ ಇಂತಹ ಸುಕೋಮಲ ಶರೀರವನ್ನು ಬ್ರಹ್ಮನು ತನ್ನ ಒರಟಾದ ಕೈಗಳಿಂದ ನಿರ್ಮಿಸಲಾರನು.

नु—ಹೀಗೆ ಇರಬಹುದೇ ಅಥವಾ ಹಾಗೋ ಎಂಬ ವಿಕಲ್ಪಾರ್ಥಕ ಅವ್ಯಯ.

अपरास्त्रीरत्नसृष्टिः—'ಅಪರಾ' ಎಂದರೆ 'ದ್ವಿತೀಯಾ' ಎರಡನೆಯವಳು ಎಂದೂ ಅಥವಾ ಅದ್ವಿತೀಯಳು ಎಂದೂ ಅರ್ಥ ಮಾಡಿದಾಗ ತಿಲೋತ್ತಮೆಯನ್ನು ಮೊದಲನೆಯವಳೆಂದು ಗಣನೆಮಾಡಬೇಕು. तिलं तिलं समानीय रत्नानां यद्विनिर्मिता। तिलोत्तमेति तत्तस्य नाम चक्रे पितामहः॥ ಮಹಾಭಾರತ, ಆದಿಪರ್ವ.]

'ಸ್ತ್ರೀರತ್ನಸೃಷ್ಟಿರಪರಾ' ಎಂದರೆ ಬ್ರಹ್ಮನ ಸೃಷ್ಟಿಗಿಂತ ಭಿನ್ನವಾದ ಸ್ತ್ರೀರತ್ನ ಎಂದೂ ಅರ್ಥಮಾಡಬಹುದು.

ಅಂದರೆ ಬ್ರಹ್ಮನಿಗೆ ಇಂತಹ ಶ್ರೇಷ್ಠ ಸೌಂದರ್ಯವನ್ನು ನಿರ್ಮಿಸುವ ಸಾಮರ್ಥ್ಯವಿಲ್ಲ ಎಂದು ಅಭಿಪ್ರಾಯ. ವಿಕ್ರಮೋರ್ವಶೀಯದಲ್ಲಿಯೂ ಇಂತಹ ಭಾವ ವರ್ಣಿತ ವಾಗಿದೆ.—

स्त्रीरत्न ಉತ್ಕೃಷ್ಟ ಸ್ತ್ರೀ "कथं निर्मातुं प्रभवेन्मनोहरमिदं रूपं पुराणो मुनिः।"
जातौ जातौ यदुत्कृष्टम् तद्रत्नमभिधीयते।

प्रत्यादेशः—ತಿರಸ್ಕರಿಸುವಿಕೆ (ನಿರಾಕೃತಿ) प्रति + आ + दिश्।

ಪದ್ಯ 6. (ಅನ್ವಯ)—अनघं तद्रूपं अनाघ्रातं पुष्पम्; कररुहैः अलूनं किसलयम्; अनाविद्धं रत्नम्; अनास्वादितरसं नवं मधु; पुण्यानाम् अखण्डं फलम् इव (अस्ति); विधिः इह कं भोक्तारं समुपस्थास्यति (तत्) (अहं) न जाने॥

'ಪರಿಪೂರ್ಣವಾದ ಶಕುಂತಲೆಯ ರೂಪು ಅನಾಘ್ರಾತ ಪುಷ್ಪದಂತೆ, ಉಗುರು ಸೋಕದ ಚಿಗುರಿನಂತೆ, ಸಾಣೆಗೆ ಹಿಡಿಯದ ರತ್ನದಂತೆ, ಹೊಸ ಮಧುವಿನಂತೆ ಪುಣ್ಯದ ಅಖಂಡ ಫಲದಂತೆ ಮನೋಹರವಾಗಿದೆ. ಇದನ್ನು ಸವಿಯಲು ಯಾವ ರಸಿಕನನ್ನು ವಿಧಿ ಹವಣಿಸಿದೆಯೋ ನಾನು ಅರಿಯೆ.'

अनघम्—ದೋಷವಿಲ್ಲದ. कररुहः—ಕೈ ಉಗುರು.

अलूनं—ಚಿವುಟಲ್ಪಡದೇ ಇರುವ अनाविद्धं—ಇನ್ನೂ ರಂಧ್ರ ಕೊರೆಯಲ್ಪಡದೇ ಇರುವ [ಸಾಣೆಗೆ ಸಿಕ್ಕಿಲ್ಲದ]. ಕಾಳಿದಾಸನ ಪ್ರಸನ್ನ ವೈದರ್ಭೀ ಶೈಲಿಗೂ ಸುಂದರ ಉಪಮೆಗಳಿಗೂ ಈ ಶ್ಲೋಕ ಉದಾಹರಣಯೋಗ್ಯವಾಗಿದೆ.

अनाघ्रातं पुष्पम्—ಅರಳಿ ನಿಂತಿರುವ ಆಕರ್ಷಕ ಪುಷ್ಪ ಆದರೆ ಅನ್ಯರಿಂದ ಇನ್ನೂ ಸ್ವೀಕೃತವಲ್ಲ.

अलूनं किसलयम्—ಬೆಡಗು ತುಂಬಿದ ಹೊಸ ಚಿಗುರು; ಆದರೆ "ಅಕ್ಷತ"ಳು. ಈ ಉಪಮೆಗಳಿಂದ ಕವಿಗೆ ತೃಪ್ತಿಯಾಗಿಲ್ಲ. ಏಕೆಂದರೆ ಹೂ ಬಾಡುತ್ತದೆ. ಚಿಗುರು ಬಣ್ಣ ಬದಲಾಯಿಸುತ್ತದೆ. ರತ್ನವು ಸಾಣೆಗೆ ಸಿಕ್ಕುತ್ತದೆ. ಹೊಸ ಮಧುವು ತನ್ನ ಮೂಲ ರುಚಿಯನ್ನು ಬದಲಾಯಿಸುತ್ತದೆ. ಆದುದರಿಂದ 'पुण्यानां अखण्डं फलम्" ಎಂದು ಆಕೆಯ ರೂಪು ಪಾವನವೆಂದು ಹೇಳಿದ್ದಾನೆ. ಪುಣ್ಯದ ಫಲ ಪುಣ್ಯವಂತನಲ್ಲೇ ನೆಲಸುವಂತೆ ಅವಳ ರೂಪು ಅವಳಲ್ಲಿ ಎಡೆಬಿಡದೇ ಪಾವನವಾಗಿ ನೆಲೆಸಿದೆ ಎಂದರ್ಥ. ಒಟ್ಟಿನಲ್ಲಿ ಸರ್ವ ಪುಣ್ಯಗಳ ಸಮಗ್ರ ಫಲವೇ ಅವಳ ರೂಪವೆಂದು ತಾತ್ಪರ್ಯ.

न जाने भोक्तारं... ಅಸೂಯೆ ಹಾಗೂ ಆತ್ಮವಿಶ್ವಾಸ ತುಂಬಿದ ರಾಜನ ಈ ವಾಕ್ಯ ಅರ್ಥಗರ್ಭಿತವಾಗಿದೆ.

चिक्कण—ಮಣಕು ಹಿಡಿದು ಬೊಂತೆಯಾಗಿರುವ.

भवन्तमन्तरेण कीदृशः तस्यः दृष्टिरागः—ಅನುರಾಗದ ಉಗಮ ಮೊದಲು ಕಣ್ಣಿನ ಮೂಲಕವೇ ಆದುದರಿಂದ ನಿನ್ನ ವಿಷಯದಲ್ಲಿ ಅವಳ ಕಣ್ಣುಗಳಿಂದ ಹೊಳೆದು ಬಂದ ಅನುರಾಗದ ಸ್ವರೂಪವೆಂತಹುದು ? (ಅಂದರೆ ನಿನ್ನ ಅನುರಾಗಕ್ಕೆ ಅವಳ ಪ್ರತಿಕ್ರಿಯೆಯೇನು ? ಎಂದು ತಾತ್ಪರ್ಯಾರ್ಥ). अन्तरेण—ಈ ಪದದ ಯೋಗ ವಿರುವುದರಿಂದ भवन्तं ಎಂಬ ದ್ವಿತೀಯಾ ವಿಭಕ್ತಿಯು ಪದ ಬಂದಿದೆ. "अन्तरान्तरेणयुक्ते। अप्रगल्भः—ಅಷ್ಟು ಧೈರ್ಯವಿಲ್ಲದ.

ಪದ್ಯ 7 (ಅನ್ವಯ)—मयि अभिमुखे सति [तया] ईक्षितं संहृतम्। [तया] अन्यनिमित्तकृतोदयं हसितं [कृतम्] अतः विनयवारितवृत्तिः मदनः तया न विवृतः, न च संवृतः ॥

'ಪ್ರೇಮ ಪ್ರಪಂಚಕ್ಕೆ ಹೊಸದಾಗಿ ಪದವಿಟ್ಟಿರುವ ಲಲನೆಯ ಲಜ್ಜಾ ಮಧುರ ಭಾವದ ವರ್ಣನೆಯಿದು. ನಾನು ಅವಳ ಕಡೆ ತಿರುಗಿದಾಗ ಅವಳು ತನ್ನ ದೃಷ್ಟಿಯನ್ನು ಬದಲಿಸುವಳು. ಯಾವುದೋ ನೆವದಿಂದ ಮಂದಹಾಸ ಬೀರುವಳು. ಅಂತೂ ವಿನಯ ಲಜ್ಜೆಗಳು ಅಡ್ಡ ಬರುವುದರಿಂದ ನನ್ನ ವಿಷಯದಲ್ಲಿ ಅವಳ ಪ್ರೇಮ ಸುಸ್ಪಷ್ಟವೂ ಆಗಿಲ್ಲ, ಅಸ್ಪಷ್ಟವೂ ಆಗಿಲ್ಲ.'

न विवृतो न च संवृतः—ಲಜ್ಜೆಯಿಂದ ಕೂಡಿದ ಕನ್ಯೆಯ ಮಧುರ ಪ್ರೇಮದ ಹೃದ್ಯವಾದ ವರ್ಣನೆ,

मिथः प्रस्थाने—ನಾವು ನಮ್ಮ ನಮ್ಮ ಪಾಡಿಗೆ ಹೊರಟಾಗ.

शालीनतया—ಲಜ್ಜೆಯ ಕಾರಣದಿಂದ.

(ಪುಟ 20)

ಪದ್ಯ 8 (ಅನ್ವಯ) तन्वी कतिचिदेव पदानि गत्वा दर्भाङ्कुरेण चरणः क्षतः इति अकाण्डे स्थिता (सती) द्रुमाणां शाखासु असक्तमपि वल्कलं विमोचयन्ती विवृत्तवदना च आसीत् ॥

ತನ್ನ ಪ್ರಿಯತಮನ ಮುಖವನ್ನು ಮತ್ತೆ ಮತ್ತೆ ನೋಡುವ ಬಯಕೆಯಿಂದಲೂ ತನ್ನ ಅನುರಾಗವನ್ನು ಅವನಿಗೆ ವ್ಯಕ್ತಪಡಿಸುವ ಆಸೆಯಿಂದಲೂ ಶಕುಂತಲೆಯು ಹೂಡಿದ ನೆಪದ ವರ್ಣನೆಯಿದು.

'ಕೆಲವೇ ಹೆಜ್ಜೆಗಳಷ್ಟು ದೂರ ಹೋಗಿ ಆ ಸುಂದರಿಯು ಅವಕಾಶವಿಲ್ಲದಿದ್ದರೂ, ದರ್ಭೆಯ ಕೊನೆಯಿಂದ ತನ್ನ ಪಾದ ಗಾಯಗೊಂಡಿತೆಂದು ನಿಲ್ಲುತ್ತಲೂ, ತನ್ನ ನಾರುಡೆಯ ಸೆರಗು ಮರದ ಕೊಂಬೆಗೆ ಸಿಕ್ಕದಿದ್ದರೂ ಅದನ್ನು ಬಿಡಿಸಿಕೊಳ್ಳುತ್ತಲೂ, ಮತ್ತೆ ಮತ್ತೆ ನಿಂತು ನನ್ನ ಕಡೆಗೆ ಓರೆ ನೋಟ ಬೀರುತ್ತಿದ್ದಳು.'

अकाण्डे—[असमये]—ಅಗತ್ಯವಾಗಿ असक्तं—ಸಿಕ್ಕಿಕೊಳ್ಳದ विमोचयन्ती—

ಬಿಡಿಸುತ್ತ.

ಬಿಡಿಸಿಕೊಳ್ಳುತ್ತಾ; वि ಉಪಸರ್ಗದಿಂದ ಕೂಡಿದ मुच् [ಬಿಡು] ಧಾತುವಿನ ಣಿಜಂತ ವರ್ತಮಾನ ಕೃದಂತ ಸ್ತ್ರೀಲಿಂಗ ಏಕವಚನ ರೂಪ.

विवृत्तवदना—ಮುಖವನ್ನು ಓರೆಮಾಡಿ (ನೋಡುತ್ತಾ).

तेन हि गृहीतपाथेयो भव—ಹಾಗಾದರೆ ಸಾಕಾದಷ್ಟು ಬುತ್ತಿಯನ್ನು [ಆಹಾ. ಸಾಮಾಗ್ರಿಗಳನ್ನು] ಶೇಖರಿಸಿಕೊ. "ಇನ್ನು ಇಲ್ಲಿಂದ ಜಾಗ್ರತೆ ಹೊರಡಲು ಸಾಧ್ಯವಿಲ್ಲ. ಅದಕ್ಕಾಗಿ ಸಿದ್ಧನಾಗು." ಎಂಬರ್ಥ. ಅಥವಾ [पाथेयं—पथि साधुः] "ನಡಿ, ಅಲ್ಲಿಗೆ ಈ ಕೂಡಲೆ ಹೊರಡು. ವಿಳಂಬ ಮಾಡಬೇಡ" ಎಂಬರ್ಥವೂ ಈ ಸಮಯದಲ್ಲಿ ಹೆಚ್ಚು ಉಚಿತ. केनापदेशेन ಎನ್ನುವ ರಾಜನ ಮಾತನ್ನು ಗಮನಿಸಿ.

नीवारषष्ठभागः—ಕಾಳು ಕಡ್ಡಿಗಳ ಆರನೇ ಒಂದು ಭಾಗವನ್ನು ರಾಜನು ಪಡೆಯಬಹುದೆಂದು ಮನು ಧರ್ಮಶಾಸ್ತ್ರದಲ್ಲಿ ಹೇಳಿದೆ.

'धान्यानामष्टमो भागः षष्ठो द्वादश एव वा' ಈ ಕಂದಾಯ ಭೂಮಿಯ ಗುಣಕ್ಕೆ ತಕ್ಕಂತೆ ಇರತಕ್ಕದ್ದು.

अक्षय्यम्—क्षेतुं न शक्यम्। ಕ್ಷಯಿಸದ.

भागधेयः—ಪುಣ್ಯ. ತಾಪಸರು ತಪಸ್ಸಿನಿಂದ ಆರ್ಜಿಸಿದ ಆರನೆಯ ಒಂದು ಭಾಗವನ್ನು ರಾಜನಿಗೆ ಅರ್ಪಿಸುವರು.

प्रतीहारभूमिः—ಬಾಗಿಲಿನ ಸಮೀಪದ ಜಾಗ.

अहो दीप्तिमतोऽपि....ಇತ್ಯಾದಿ. ತೇಜೋಪರಿಪೂರ್ಣನಾದರೂ ನಮ್ಮ ನಂಬಿಕೆಗೂ ನೆಚ್ಚಿಕೆಗೂ ಅರ್ಹನಾಗಿ ನಾವು ಅವನ ಬಳಿಗೇ ಹೋಗುವಂತೆ ಆಕರ್ಷಕನಾಗಿದ್ದಾನೆ. ಎಂದರೆ, ನಮ್ಮ ಅಂತರಂಗ ಮಿತ್ರ ಎಂಬ ದೃಢ ವಿಶ್ವಾಸ ಇವನ ವಿಚಾರದಲ್ಲಿ ನಮಗೆ ಮೂಡುತ್ತದೆ.

(ಪುಟ 21)

बलभित्सखः—ಇಂದ್ರನ ಸ್ನೇಹಿತ, बलभित् ಎಂದರೆ ಇಂದ್ರ. सखि ಶಬ್ದವು ಸಮಾಸಾಂತದಲ್ಲಿ ಅಕಾರಾಂತವಾಗುತ್ತದೆ. 'राजाहस्सखिभ्यः टच्' ಮುಂದೆ ಏಳನೇ ಅಂಕದಲ್ಲಿ ಇಂದ್ರನ ಸಹಾಯಕ್ಕೆ ದುಷ್ಯಂತನು ಹೋಗುವುದರಿಂದ ಈ ವಿಶೇಷಣ ಅರ್ಥವತ್ತಾಗಿದೆ.

स्वस्ति भवते—ನಿನಗೆ ಶುಭವಾಗಲಿ. स्वस्ति ಪದದ ಪ್ರಯೋಗವಿರುವುದರಿಂದ भवते ಚತುರ್ಥ್ಯಂತ ಪದವು ಬಂದಿದೆ. "नमः स्वस्ति स्वाहा स्वधा अलं वषट् योगाच।" सनाथीक्रियतां आश्रमः—ಈ ಮಾತಿನಲ್ಲಿ ಹುದುಗಿರುವ ವಿಶೇಷ ಧ್ವನಿಯನ್ನು ಗಮನಿಸಿ. ಆಶ್ರಮಕ್ಕೂ, ಈಗ ಆಶ್ರಮದ ಮೇಲ್ವಿಚಾರಣೆಯಲ್ಲಿರುವ ಶಕುಂತಳೆಗೂ ಅವನು ನಾಥನಾಗಬೇಕು. ಉತ್ತಮವಾದ ಧ್ವನಿ.

ರಾಜನು ತಡಮಾಡದೆ ಒಪ್ಪಿಕೊಂಡು 'ಆಪನ್ನಾಭಯಸತ್ರದೀಕ್ಷಿತ'ರಾದ ತನ್ನ ಪೂರ್ವಜರ ಮಾರ್ಗವನ್ನೇ ಅನುಸರಿಸುತ್ತಾನೆ. ಜೊತೆಗೆ ಅವನ ಸಮಸ್ಯೆಯೂ ಪರಿಹಾರವಾಗುತ್ತದೆ. ಆಶ್ರಮಕ್ಕೆ ಪುನಃ ಭೇಟಿಕೊಡಲು ಯಾವುದಾದರೂ ನೆಪ ಹುಡುಕುತ್ತಿದ್ದ ಅವನಿಗೆ ಇದು ದೈವಾನುಗ್ರಹವಷ್ಟೆ. ಈಗ ಅಲ್ಲಿಗೆ ಭೇಟಿ ಕೊಡುವುದಷ್ಟೇ ಅಲ್ಲ ಸ್ವಲ್ಪ ಕಾಲ ಅಲ್ಲೇ ಇರಬಹುದಾಗಿದೆ. ಜೊತೆಗೆ ತನ್ನ ಸಾಮರ್ಥ್ಯ ಪರಾಕ್ರಮವನ್ನು ಕಿವಿಯಲ್ಲಿ ಮಾತ್ರ ಕೇಳಿದ್ದ ಶಕುಂತಲೆಯು ತನ್ನನ್ನು ಕಣ್ಣಾರೆ ಕಾಣುವಂತೆ ಮಾಡುವ ಅದ್ಭುತ ಸಂವಿಧಾನ ಕೌಶಲ.

ಪದ್ಯ 9 (ಅನ್ವಯ) पूर्वेषां अनुकारिणि त्वयि इदं युक्तरूपम् । आपन्नाभयसत्रेषु पौरवाः दीक्षिताः खलु ॥

'ನಿನ್ನ ಪೂರ್ವಜರ ಶ್ರೇಷ್ಠ ಆಚಾರಗಳನ್ನು ಅನುಷ್ಠಾನದಲ್ಲಿ ತಂದಿರುವ ನೀನು ಈ ರೀತಿ ಆಶ್ರಮದ ರಕ್ಷಕನಾಗಲು ಒಪ್ಪಿರುವುದು ಉಚಿತವಾಗಿಯೇ ಇದೆ. ಏಕೆಂದರೆ ಪುರುವಂಶದ ರಾಜರು ಕಷ್ಟದಿಂದ ಭೀತರಾಗಿರುವವರನ್ನು ರಕ್ಷಿಸುವುದರಲ್ಲಿ ಬದ್ಧ ಕಂಕಣರು.'

आपन्नाभयसत्रेषु—ಆಪತ್ತಿನಲ್ಲಿರುವವರಿಗೆ ಅಭಯಪ್ರದಾನವೆಂಬ ಯಜ್ಞದಲ್ಲಿ.

दीक्षिता—(ದೀಕ್ಷೆ ತೊಟ್ಟವರು) ಕಂಕಣಬದ್ಧರು.

पौरवाः—पुरोः, वंशसम्भवाः ।

युक्तरूपम्—ಬಹು ಯೋಗ್ಯ.

अनुकारिणि पूर्वेषाम्—अनु ಪೂರ್ವಕವಾದ कृ ಧಾತು ಸಾದೃಶ್ಯಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

प्रथमं सपरिवाहमासीत् । इदानीं । .... ಇತ್ಯಾದಿ — ಶಕುಂತಲೆಯನ್ನು ಕಾಣ ಬೇಕೆಂಬ ಆಸೆ ಮೊದಲೇನೋ ಅಪಾರವಾಗಿತ್ತು. ಈಗ ರಾಕ್ಷಸ ವೃತ್ತಾಂತದಿಂದ ಆ ಆಸೆ ಸ್ವಲ್ಪವೂ ನನ್ನಲ್ಲಿ ಉಳಿದಿಲ್ಲ. ವಿದೂಷಕ ಸ್ವಭಾವದಿಂದಲೇ ಹೇಡಿ. ಆದುದರಿಂದ ಶಕುಂತಲೆಯನ್ನು ನೋಡಲು ಅವನಿಗೆ ಇಷ್ಟವಿದ್ದರೂ ರಾಕ್ಷಸ ವೃತ್ತಾಂತದಿಂದ ಅಲ್ಲಿಗೆ ಅವನು ಹೋಗಲು ಒಪ್ಪುವುದಿಲ್ಲ. ಒಟ್ಟಿನಲ್ಲಿ ವಿದೂಷಕನು ಶಕುಂತಲೆಯನ್ನು ನೋಡುವ ಅವಕಾಶವಿದ್ದರೂ ನೋಡದೆ ಹಿಂತಿರುಗುವಂತೆ ಈ ಸಂಗತಿಯನ್ನು ರೂಪಿಸಿರುವುದು ನಾಟಕದ ದೃಷ್ಟಿಯಿಂದ ಮುಖ್ಯವಾಗುತ್ತದೆ. 4 ಮತ್ತು 5ನೆಯ ಅಂಕಗಳಲ್ಲಿ ಇದರ ಪರಿಣಾಮ ವ್ಯಕ್ತ ವಾಗುತ್ತದೆ.

(ಪುಟ 22)

अम्बाभिः—ಮಾತೆಗೆ ಗೌರವವನ್ನು ಸೂಚಿಸಲು ಬಹುವಚನ ಬಂದಿದೆ.

त्रिशङ्कुरिव अन्तराले तिष्ठ—"ಅರಮನೆಗೂ ಹೋಗದೆ ಆಶ್ರಮಕ್ಕೂ ಹೋಗದೆ

ತ್ರಿಶಂಕುವಿನಂತೆ ಮಧ್ಯದಲ್ಲೇ ನಿಂತುಕೋ." ತ್ರಿಶಂಕು ಸೂರ್ಯವಂಶದ ರಾಜ. ತನ್ನ ಭೌತಿಕ ಶರೀರದೊಂದಿಗೆ ಸ್ವರ್ಗದ ಸುಖವನ್ನು ಅನುಭವಿಸಲು ಹಂಬಲಿಸುತ್ತಲಿದ್ದ. ವಸಿಷ್ಠರನ್ನು ಸಂಧಿಸಿ ಈ ಉದ್ದೇಶದಿಂದ ಒಂದು ಯಜ್ಞವನ್ನು ಮಾಡಿಸಬೇಕೆಂದು ಪ್ರಾರ್ಥಿಸಿದ. ಅವರು ಒಪ್ಪಲಿಲ್ಲ. ಅನಂತರ ಅವರ ಪುತ್ರರನ್ನು ಒತ್ತಾಯ ಪಡಿಸಿದ. ಕುಪಿತರಾದ ಅವರು 'ಚಂಡಾಲನಾಗು' ಎಂದು ಅವನನ್ನು ಶಪಿಸಿದರು. ಆದರೆ ತನ್ನ ಇಷ್ಟಾರ್ಥವನ್ನು ಪಡೆಯಲು ವಿಶ್ವಾಮಿತ್ರರನ್ನು ಶರಣು ಹೋದ. ಅವರು ಸಮ್ಮತಿಸಿ ಯಜ್ಞವನ್ನು ಪ್ರಾರಂಭಿಸಿದರು. ಹಟ ತೊಟ್ಟು ತ್ರಿಶಂಕುವನ್ನು ಸ್ವರ್ಗಕ್ಕೆ ಹೋಗುವಂತೆ ಮಾಡಿದರು. ಇಂದ್ರನಿಗೆ ಈ ವಿಷಯ ತಿಳಿಯಿತು. ಕೋಪದಿಂದ ಅವನನ್ನು ಕೆಳಕ್ಕೆ ತಳ್ಳಿದನು. ತ್ರಿಶಂಕುವಿನ ಆರ್ತ ಸ್ಥಿತಿಯನ್ನು ಗಮನಿಸಿದ ವಿಶ್ವಾಮಿತ್ರರು ಅವನನ್ನು ಭೂಮಿಗೆ ಬೀಳದಂತೆ ಅಲ್ಲಿಯೇ ತಡೆದರು. ಹೀಗೆ ಮೇಲೆಯೂ ಏರದೆ ಕೆಳಗೂ ಇಳಿಯದೆ ತ್ರಿಶಂಕು ಅಂತರಾಳದಲ್ಲಿ ನಿಂತ.

ಸಖೆ त्वमम्बया पुत्र इति प्रतिगृहीतः — 'ಮಿತ್ರ, ನಿನ್ನನ್ನು ನನ್ನ ತಾಯಿ ಮಗನೆಂದೇ ಭಾವಿಸಿದ್ದಾಳೆ.' ಈ ಮಾತನ್ನು ಹೇಳಿ ದುಷ್ಯಂತ ತನ್ನ ಪ್ರತಿನಿಧಿಯಾಗಿ ವಿದೂಷಕನೇ ರಾಜಧಾನಿಗೆ ಹೋಗಿ ಮಾತೃಪ್ರಸಾದವನ್ನು ಸ್ವೀಕರಿಸುವಂತೆ ಮಾಡುತ್ತಾನೆ. ನಾಟಕದ ಓಟಕ್ಕೆ ಇದು ಮಾರ್ಗ ಮಾಡಿಕೊಡುತ್ತದೆ.

न खलु मां रक्षोभीरुकम्....ಇತ್ಯಾದಿ—'ನನ್ನನ್ನು ರಾಕ್ಷಸರಿಗೆ ಹೆದರಿದ ಅಂಜುಕುಳಿಯೆಂದು ಭಾವಿಸುವುದಿಲ್ಲ ತಾನೆ?'

ननु तपोवनोपरोधः परिहरणीयः....ಇತ್ಯಾದಿ—ತಪೋವನಕ್ಕೆ ಅಡಚಣೆಯಾಗಬಾರದೆಂದು ಸೈನ್ಯವನ್ನು ಕಳುಹಿಸುತ್ತೇನೆ. ಬೇಟೆಯನ್ನು ನಿಲ್ಲಿಸಲು ದುಷ್ಯಂತನು ಇದೇ ಕಾರಣವನ್ನು ಕೊಟ್ಟುದುದನ್ನು ಜ್ಞಾಪಿಸಿಕೊಳ್ಳಿ. उपरोध ಬಾಧೆ, ತೊಂದರೆ. परिहर्तुं योग्यः=परिहरणीयः

(ಪುಟ 23)

युवराजोऽस्मीदानीं संवृत्तः — 'ಈಗ ನಾನೇ ಯುವರಾಜನಾಗಿಬಿಟ್ಟದ್ದೇನೆ.' ವಿದೂಷಕನಿಗೆ ಈ ಸಂಗತಿ ಹರ್ಷವನ್ನು ತರುತ್ತದೆ. ಜೊತೆಗೆ ದುಷ್ಯಂತನಿಗೆ ಶಕುಂತಲೆಯಲ್ಲಿನ ಪ್ರೇಮವನ್ನು ಬೆಳೆಸಲು ಅವಕಾಶವನ್ನು ಕೊಡುತ್ತದೆ. ಹೃದ್ಯವಾದ ಕಲಾನೈಪುಣ್ಯ.

चपलोऽयं वटुः — ಈ ವಿದೂಷಕ ಚಪಲ ಸ್ವಭಾವದವನು. ಬಾಯಿಗೆ ಬಂದಂತೆ ಮಾತನಾಡುತ್ತಾನೆ. ಇದನ್ನು ಅರಿತು ದುಷ್ಯಂತನು ಎಚ್ಚರಿಕೆ ವಹಿಸಿ ಮುಂದಿನ ಮಾತನ್ನು ಹೇಳುತ್ತಾನೆ.

ಪದ್ಯ 10 (ಅನ್ವಯ)—सखे वयं क्व ; मृगशावैः समं एधितः परोक्षमन्मथः (सः) जनः क्व (पश्य), परिहासविजल्पितं वचः परमार्थेन न गृह्यताम् ॥

'ಮಿತ್ರನೇ ಅಂತಃಪುರದ ಲಾವಣ್ಯವತಿಯರೊಡನೆ ಶೃಂಗಾರ ರಸವನ್ನು ಸವಿಯುವ ನಾವೆಲ್ಲಿ ? ಎಳೆಜಿಂಕೆಗಳೊಡನೆ ಬೆಳೆದು ಶೃಂಗಾರ ಚೇಷ್ಟೆಗಳನ್ನೇ ಅರಿಯದ ಆಶ್ರಮದ ಈ ಮುಗ್ಧ ಕನ್ಯೆಯೆಲ್ಲಿ ? ಅವಳಲ್ಲಿ ನನಗೆ ಅನುರಾಗ ಸಾಧ್ಯವೇ ? ಪರಿಹಾಸ ಕೋಸ್ಕರ ಏನೇನೋ ಹರಟಿದೆ. ಅದನ್ನೆಲ್ಲಾ ನಿಜವೆಂದೇ ಭಾವಿಸಬೇಡ.

परिहासविजल्पितम्—ತಮಾಷೆಗಾಗಿ ಆಡಿದ ಮಾತು. परमार्थ—ಸತ್ಯ.

क्व....क्व—ಸಂಸ್ಕೃತದಲ್ಲಿ ಒಂದಕ್ಕೊಂದು ದೂರದ ವಿಷಯ ಎನ್ನುವ ಅರ್ಥದಲ್ಲಿ ಈ ರೀತಿ ಎರಡು क्व ಶಬ್ದಗಳ ಪ್ರಯೋಗವಿರುತ್ತದೆ.

ಉದಾಹರಣೆ : क्व सूर्यप्रभवो वंशः क्व चाल्पविषया मतिः । (ರಘುವಂಶ)
तपः क्व वत्से क्व च तावकं वपुः । — (ಕುಮಾರಸಂಭವ)

परोक्षमन्मथः — ಪ್ರೇಮಕ್ಕೆ ದೂರವಾದ (ಶೃಂಗಾರ ರಸವನ್ನೇ ಅರಿಯದ) जनः ಎಂಬುದಕ್ಕೆ ವಿಶೇಷಣ.

मृगशावैः समं एधितः—ಜಿಂಕೆಗಳೊಡನೆ ಬೆಳೆದ. समं (ಜೊತೆಯಲ್ಲಿ) ಎಂಬ ಅವ್ಯಯ ಬಂದಿರುವುದರಿಂದ मृगशावैः ಎಂಬ ತೃತೀಯಾ ವಿಭಕ್ತ್ಯಂತಪದ ಬಂದಿದೆ. 'साकं सार्धं समं सह' (ಅಮರ).

ಶಕುಂತಲೆಗೆ ಸಂಬಂಧಿಸಿದಂತೆ ತಾನು ಆಡಿದ ಮಾತೆಲ್ಲ ಕೇವಲ 'ಪರಿಹಾಸ ವಿಜಲ್ಪಿತ'ವೆಂದು ರಾಜನು ವಿದೂಷಕನನ್ನು ನಂಬಿಸಿ ತಾನು ಗೆದ್ದೆನೆಂದು ಭಾವಿಸುತ್ತಾನೆ. ಆದರೆ ವಿಧಿ ಬೇರೆ ಎಣಿಸುತ್ತದೆ. ಇದರ ದಾರುಣ ಪರಿಣಾಮ ಐದು ಮತ್ತು ಆರನೆಯ ಅಂಕಗಳಲ್ಲಿ ಸ್ಪಷ್ಟವಾಗುತ್ತದೆ. ಹೀಗೆ ಈ ಅಂಕದಲ್ಲಿ ನಿರೂಪಿಸಲ್ಪಟ್ಟಿರುವ ನಾನಾ ಪ್ರಸಂಗಗಳು ಸ್ವಾಭಾವಿಕವಾಗಿಯೂ ಅರ್ಥಗರ್ಭಿತವಾಗಿಯೂ ಪರಿಣಾಮದಲ್ಲಿ ಪ್ರಭಾವಕಾರಿಗಳಾಗಿಯೂ ಇವೆ. ಯಾವ ಪಾತ್ರದ ನಡೆ-ನುಡಿಯಲ್ಲಿಯೂ ಅತಿಯಾಗಲೀ, ಕೊರತೆಯಾಗಲೀ, ಅಸಂಭವವಾಗಲಿ ಇಲ್ಲ. ಒಟ್ಟನಲ್ಲಿ ಕಾಳಿದಾಸನ ಕಲಾನೈಪುಣ್ಯಕ್ಕೆ ಕನ್ನಡಿಯಾಗಿದೆ, ಈ ಅಂಕ.

# ಮೂರನೆಯ ಅಂಕ

[ಕಣ್ವಾಶ್ರಮದ ಸಮೀಪದಲ್ಲಿ ಈ ಅಂಕದ ವಿಷ್ಕಂಭಕ ಪ್ರಸಂಗವು ಜರುಗುತ್ತದೆ. ಉಶೀರಾನುಲೇಪನವನ್ನೂ, ಕಮಲದ ಎಲೆಗಳನ್ನೂ ಅಸ್ವಸ್ಥಳಾಗಿದ್ದ ಶಕುಂತಲೆ ಗೋಸ್ಕರ ತರುತ್ತಲಿದ್ದ ಪ್ರಿಯಂವದೆಯನ್ನು ದರ್ಭೆ ಸಂಗ್ರಹಿಸಿತರಲು ಹೋಗಿದ್ದ ಶಿಷ್ಯನು ಕಾಣುವುದು ಅಲ್ಲಿಯೇ. ಅಂಕದ ಮುಖ್ಯ ದೃಶ್ಯವು ಜರುಗುವುದು ಮಾಲಿನೀತೀರದ ವೇತಸಗೃಹದಲ್ಲಿ. ಎರಡನೆಯ ಅಂಕದ ಪ್ರಸಂಗಗಳು ನಡೆದ ನಂತರ ಸುಮಾರು ಒಂದು ಪಕ್ಷವು ಕಳೆದಿದೆ. ವಿಷ್ಕಂಭಕದ ಪ್ರಸಂಗ ಆ ದಿನ ಬೆಳಿಗ್ಗೆ ನಡೆಯುತ್ತದೆ. ಮುಖ್ಯ ದೃಶ್ಯದ ಪ್ರಸಂಗ ಸುಮಾರು ಮಧ್ಯಾಹ್ನ ಎರಡು ಗಂಟೆಯಿಂದ ಸಂಜೆ ಆರು ಗಂಟೆಯ ಅಂತರದಲ್ಲಿ ನಡೆಯುತ್ತದೆ.

ಈ ಅಂಕ ಪ್ರಾರಂಭವಾಗುವುದು ಒಂದು ವಿಷ್ಕಂಭಕದಿಂದ. ದರ್ಭೆಯನ್ನು ಸಂಗ್ರಹಿಸಿ ತಂದಿರುವ ಆಶ್ರಮದ ಶಿಷ್ಯನೊಬ್ಬನು, 'ರಕ್ಷಕನಾಗಿ ದುಷ್ಯಂತನು ಕಾಶ್ಯಪಾಶ್ರಮವನ್ನು ಪ್ರವೇಶಿಸುತ್ತಿದ್ದಂತೆಯೇ ದಾನವರು ಹೆದರಿ ಓಡಿದ ರೆಂದೂ, ಆ ಕಾರಣದಿಂದ ಧರ್ಮಕಾರ್ಯಗಳು ನಿರಾಂತಕವಾಗಿ ನಡೆಯುತ್ತಲಿವೆ ಯೆಂದೂ' ತಿಳಿಸಿ, ದುಷ್ಯಂತನ ಪ್ರಭಾವವನ್ನು ಕೊಂಡಾಡುತ್ತಾನೆ. ಈ ವೇಳೆಗೆ ಆ ಕಡೆಯೇ ಬಂದ ಪ್ರಿಯಂವದೆಯಿಂದ ಶಕುಂತಲೆಯು ಅಸ್ವಸ್ಥ ಳಾಗಿರುವ ವಿಷಯವು ಅವನಿಗೆ ತಿಳಿಯುತ್ತದೆ. ಶಕುಂತಲೆಯನ್ನು ಎಚ್ಚರಿಕೆ ಯಿಂದ ಉಪಚರಿಸಬೇಕೆಂದು ಪ್ರಿಯಂವದೆಗೆ ತಿಳಿಸಿ, ನಾನು ಮಂತ್ರೋದಕ ವನ್ನು ಗೌತಮಿಯ ಕೈಯಲ್ಲಿ ಕಳುಹಿಸಿಕೊಡುತ್ತೇನೆಂದು ಹೇಳಿ ಅವನು ತೆರಳುತ್ತಾನೆ.]

ಮುಖ್ಯದೃಶ್ಯ ಪ್ರಾರಂಭವಾಗುವುದು ರಾಜನ ಆಗಮನದಿಂದ. ಆಶ್ರಮದ ರಕ್ಷಣೆಯ ಕಾರ್ಯದಲ್ಲಿ ರಾಜನಿಗೆ ಬಿಡುವು ಸಿಕ್ಕಿದೆ. ಅವನ ಮನಸ್ಸು ಶಕುಂತಲೆಯಲ್ಲಿ ಅನುರಕ್ತಗೊಂಡಿದ್ದು ಈ ಬಿಡುವು ಅವಳನ್ನು ಕಾಣಬೇಕೆಂದು ಅವನ ಆಸೆಯನ್ನು ಪ್ರೇರಿಸಿದೆ. ಅವನು ಮಾಲಿನೀತೀರದ ಲತಾಕುಂಜಕ್ಕೆ ತೆರಳುತ್ತಾನೆ. ಅಲ್ಲಿ ಮರಗಳ ಹಿಂದೆ ನಿಂತು ಪುಷ್ಪಶಯ್ಯೆಯಲ್ಲಿ ಮಲಗಿರುವ ಮತ್ತು ತನ್ನ ಆಪ್ತ ಸಖಿಯರಿಂದ ಉಪಚರಿಸಲ್ಪಡುತ್ತಲಿರುವ ತನ್ನ ಮನೋರಮೆ ಶಕುಂತಲೆಯನ್ನು ನೋಡುತ್ತಾನೆ. ಸನ್ನಿವೇಶವನ್ನು ಗಮನಿಸಿ, ಅವಳೂ ತನ್ನಂತೆಯೇ ಮದನತಾಪಕ್ಕೆ ಸಿಕ್ಕಿರಬಹುದೇ! ಎಂದು ಶಂಕಿಸುತ್ತಾನೆ. ಈ ವೇಳೆಗೆ ಆ ಮೂರು ಜನರಲ್ಲೇ ಸಂಭಾಷಣೆ ಪ್ರಾರಂಭ ವಾಗುತ್ತದೆ. ಸಖಿಯರು ಬಹುವಾಗಿ ಒತ್ತಾಯಪಡಿಸಿದ ಮೇಲೆ ಶಕುಂತಲೆ ತನ್ನ ಆ ಸ್ಥಿತಿಗೆ ಕಾರಣವನ್ನು ಲಜ್ಜೆಯಿಂದ ತಿಳಿಸುತ್ತಾಳೆ; ಜೊತೆಗೆ ರಾಜನ ಪ್ರೇಮವನ್ನು ತನಗೆ ದೊರಕಿಸಿಕೊಟ್ಟರೆ ಮಾತ್ರ ತಾನು ಬದುಕಬಹುದೆಂದೂ, ಇಲ್ಲವಾದರೆ ತನಗೆ

ತಿಲಾಂಜಲಿ ಕೊಡಬಹುದೆಂದೂ ಸ್ಪಷ್ಟಪಡಿಸುತ್ತಾಳೆ. ವೃಕ್ಷದ ಹಿಂದೆ ನಿಂತು ಇದನ್ನೆಲ್ಲಾ ಕೇಳಿದ ರಾಜನ ಹೃದಯ ಆನಂದಸಾಗರವಾಗುತ್ತದೆ.

ಸಖಿಯರು ಶಕುಂತಲೆಯ ಆಶಯವನ್ನೂ ಮೆಚ್ಚಿ ಪ್ರೋತ್ಸಾಹಿಸುತ್ತಾರೆ. ಉಪಾಯವನ್ನು ಯೋಚಿಸಿ ಒಂದು ನಿರ್ಧಾರಕ್ಕೆ ಬರುತ್ತಾರೆ. ಶಕುಂತಲೆ ತನ್ನ ಅನುರಾಗವನ್ನು ವ್ಯಕ್ತಪಡಿಸುವ ಒಂದು ಪತ್ರವನ್ನು ಬರೆಯುವುದೆಂದೂ, ಅದನ್ನು ದೇವತಾಪ್ರಸಾದ ಪುಷ್ಪಗಳನ್ನು ಕೊಡುವ ನೆಪದಲ್ಲಿ ಪ್ರಿಯಂವದೆ ರಾಜನಿಗೆ ತಲುಪಿಸುವು ದೆಂದೂ ತೀರ್ಮಾನವಾಗುತ್ತದೆ. ನಂತರ ಕಮಲಪತ್ರದ ಮೇಲೆ ತನ್ನ ಉಗುರಿ ನಿಂದಲೇ ಶಕುಂತಲೆ ಒಂದು ಮಧುರ ಪ್ರೇಮಪತ್ರವನ್ನೇ ಬರೆಯುತ್ತಾಳೆ. ಅದನ್ನು ಸಖಿಯರ ಮುಂದೆ ಓದುತ್ತಾಳೆ. ಕೂಡಲೆ ರಾಜನೇ ಪ್ರತ್ಯಕ್ಷನಾಗಿ ತನ್ನ ಅನುರಾಗ ವನ್ನೂ ವ್ಯಕ್ತಗೊಳಿಸುತ್ತಾನೆ.

ದುಷ್ಯಂತ ಗಾಂಧರ್ವವಿಧಿಯಂತೆ ತನ್ನನ್ನು ವಿವಾಹವಾಗುವಂತೆ ಅವಳನ್ನು ಒಲಿಸಿಕೊಳ್ಳುತ್ತಾನೆ.

ಈ ವೇಳೆಗೆ ಆಶ್ರಮದ ಅಜ್ಜಿ ಗೌತಮಿಯು ಶಕುಂತಲೆಯು ಅಸ್ವಸ್ಥಳಾಗಿರುವ ವಿಷಯ ತಿಳಿದು ಶಿಷ್ಯ ಕಳುಹಿಸಿದ ಮಂತ್ರಪೂತಜಲದೊಂದಿಗೆ ಅಲ್ಲಿಗೆ ಬರುತ್ತಾಳೆ. ಆ ಸೂಚನೆಯನ್ನು ಸಖಿಯರಿಂದ ಪಡೆದ ಪ್ರಣಯಿಗಳು ಪ್ರಥಮ ಸಮಾಗಮದಿಂದ ಬೇರ್ಪಡುತ್ತಾರೆ. ಸಖಿಯರೊಂದಿಗೆ ಅಲ್ಲಿಂದ ಹೊರಡುವ ಮುನ್ನ ಶಕುಂತಲೆ ಸಾಂಕೇತಿಕ ಭಾಷೆಯಲ್ಲಿ ರಾಜನಿಗೆ ತನ್ನ ಹೃದಯದ ಆಸೆಯನ್ನು ಸೂಚಿಸುತ್ತಾಳೆ.

ಆಗಲೇ ಸಂಜೆಯಾಗಿದೆ; ದಾನವರ ನೆರಳು ಕಾಣಿಸುತ್ತಿದೆ. ರಾಜನು ಆಶ್ರಮ ದಲ್ಲಿನ ಧರ್ಮಕಾರ್ಯ ರಕ್ಷಣೆಗೆ ಕಂಕಣಬದ್ಧನಾಗಿ ತೆರಳುತ್ತಾನೆ.

(ಪುಟ 24)

यजमानशिष्यः—ಕಣ್ವಾಶ್ರಮ ನಿವಾಸಿಗಳಾದ ಋತ್ವಿಜರ ಶಿಷ್ಯ.
यजमानः = यज्वा तस्य शिष्यः

आकाशे—(ಅಲಕ್ಷ್ಯವಾಗಿ) ರಂಗಸ್ಥಲದಿಂದ ಹೊರಗಿರುವ ಪಾತ್ರದೊಡನೆ ಸಂಭಾಷಣೆ ಮಾಡುವಾಗ ಕೊಡುವ ರಂಗಸೂಚನೆ. रङ्गाद्बहिः स्थितं पात्रं सम्बोध्य यत् कथ्यते तत् 'आकाशे'

उशीरानुलेपनम्—ಶರೀರದ ತಾಪವನ್ನು ಹೋಗಲಾಡಿಸುವ ಒಂದು ಬಗೆಯ ಲೇಪನ. 'ವೀರಣ'ವೆಂಬ ಜಾತಿಯ ಸುವಾಸನೆ ಹುಲ್ಲಿನಿಂದ ತಯಾರಿಸಲ್ಪಟ್ಟದ್ದು, ಲಾವಂಚ.

श्रुतिमभिनीय—ತನ್ನ ಪ್ರಶ್ನೆಗೆ ಉತ್ತರವನ್ನು ಕೇಳಿಸಿಕೊಂಡವನಂತೆ ಅಭಿನಯಿಸಿ ('प्रतिवचनमश्रुतमपि श्रुतमिवाभिनीय)'

आतपलङ्घनात्—ಬಿಸಿಲಿನಿಂದ ಬಳಲಿರುವ ಕಾರಣ.

शरीरनिर्वापणाय-ಶರೀರದ ತಾಪವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ निर् + √वा + णिच् + ल्युट् भावे—(निर्वापणम्) + तस्मै ।

गौतमीहस्ते....ಶಿಷ್ಯನ ಈ ಮಾತು ಮುಂದೆ ನಾಯಕ-ನಾಯಕಿಯರ ಸಮಾಗಮಕ್ಕೆ ಗೌತಮಿಯ ಆಗಮನದಿಂದ ಅಡ್ಡಿಯಾಗುತ್ತದೆ ಎಂಬುದನ್ನು ತಿಳಿಸುವ ಒಂದು ಜಾಣ್ಮೆಯ ಮುನ್ಸೂಚನೆ. ಇಂತಹ ಒಂದೊಂದು ವಾಕ್ಯವೂ ಅರ್ಥವ್ಯಾಪ್ತಿಯಿಂದ ಕೂಡಿ ಪರಿಣಾಮಕಾರಿಯಾಗುತ್ತದೆ.

ಪದ್ಯ 1. (ಅನ್ವಯ) तपसः वीर्यं (अहं) जाने ; सा बाला परवती इति मे विदितम् । तथापि इदं हृदयं ततः निवर्तयितुं (अहं) अलं न अस्मि ॥

'ತಪಸ್ಸಿನ ಪ್ರಭಾವವನ್ನೂ ಅರಿತಿದ್ದೇನೆ; ಶಕುಂತಲೆ ಪರಾಧೀನೆ : ಎಂಬುದನ್ನೂ ತಿಳಿದಿದ್ದೇನೆ : ಆದರೂ ಅವಳಲ್ಲಿ ಅನುರಾಗ ತುಂಬಿ ನೆಟ್ಟಿರುವ ನನ್ನ ಮನಸ್ಸನ್ನು ಹಿಂತೆಗೆಯಲು ಅಸಮರ್ಥನಾಗಿದ್ದೇನೆ'.

जाने तपसो वीर्यं—ರಾಜ ತನ್ನ ಇತಿಮಿತಿಗಳನ್ನೂ ಸನ್ನಿವೇಶವನ್ನೂ ಅರಿತಿದ್ದಾನೆ. ಶಕುಂತಲೆಯನ್ನು ಪಡೆಯುವುದು ಸುಲಭವಲ್ಲ. ಏಕೆಂದರೆ, ಮೊದಲನೆಯದಾಗಿ ಅವಳು 'ಪರಾಧೀನೆ' ವಿವಾಹಾದಿ ವಿಷಯಗಳಲ್ಲಿ ಸಾಕುತಂದೆ ಕಣ್ವರನ್ನು ಕೇಳದೇ ಅವಳೇ ಮುಂದುವರಿಯುವಂತಿಲ್ಲ. ಎರಡನೆಯದಾಗಿ, ತಾನೆ ಬಲವಂತವಾಗಿ ಅವಳನ್ನು ಪಡೆಯಲೆತ್ನಿಸುವುದಾಗಲೀ, ರಹಸ್ಯವಾಗಿ ಅವಳನ್ನು ಅಪಹರಿಸುವುದಾಗಲೀ ಯೋಚಿಸುವಂತೆಯೇ ಇಲ್ಲ. ಕಾರಣ ಅವರಿಗೆ ತಪಸ್ಸಿನ ಶಕ್ತಿ ಇದೆ. ಆದುದರಿಂದ ನಿಗ್ರಹಾನುಗ್ರಹಶಕ್ತರಾದ ಅವರು ಕೋಪಗೊಂಡು ತನ್ನನ್ನು ಉಗ್ರವಾಗಿ ಶಪಿಸಬಹುದು.

नालमस्मि—ಸಮರ್ಥನಾಗಿಲ್ಲ.

अतिसंवीयते कामिजनसार्थः—ಕಾಮಿಜನ ಸಮೂಹ ಈ ರೀತಿ ಮೋಸಗೊಳಿಸಲ್ಪಡುತ್ತದೆ. सार्थः ಸಮೂಹಃ अतिसंधान—ಮೋಸ.

(ಪುಟ 25)

ಪದ್ಯ–2 (ಅನ್ವಯ) तव कुसुमशरत्वं इन्दोः शीतरश्मित्वम् इदं द्वयम् अपि मद्विधेषु अयथार्थं दृश्यते । इन्दुः हिमगर्भैः मयूखैः अग्निं विसृजति, त्वमपि कुसुमबाणान् वज्रसारीकरोषि ॥

'ಎಲೈ ಮನ್ಮಥ, ನೀನು ಕುಸುಮಶರ ಎನ್ನುವ ಮಾತೂ, ಚಂದ್ರನು ಶೀತರಶ್ಮಿ ಎನ್ನುವ ಮಾತೂ ನನ್ನಂತಹ ಕಾಮಿಗಳ ವಿಷಯದಲ್ಲಿ ಸುಳ್ಳಾಗುತ್ತದೆ. ಏಕೆಂದರೆ ಚಂದ್ರನು ಹಿಮ ತುಂಬಿದ ತನ್ನ ಕಿರಣಗಳಿಂದ ಅಗ್ನಿಯನ್ನು ಸುರಿಸುತ್ತಾನೆ. ನೀನು ನಿನ್ನ ಕೋಮಲ ಕುಸುಮ ಶರಗಳನ್ನು ವಜ್ರಪ್ರಾಯವಾಗಿ ಮಾಡುತ್ತೀಯೆ.'

कुसुमशरत्वम्—ಪ್ರೇಮದೇವತೆಯಾದ ಮನ್ಮಥನನ್ನು ಪಂಚಬಾಣ, ಪುಷ್ಪಬಾಣ (ಪುಷ್ಪಚಾಪನೆಂದು ಕೆಲವು ಸಲ) ಕುಸುಮಾಯುಧನೆಂದು ಕರೆಯುತ್ತಾರೆ. ಭರತನ ಪ್ರಕಾರ ಅವನ ಐದು ಬಾಣಗಳು (1) ಹರ್ಷಣ (2) ಪ್ರಹಸನ (3) ಮೋಹನ (4) ಮೂರ್ಛನ ಮತ್ತು (5) ವಿಕರ್ಷಣ, ಅಮರಸಿಂಹನ ಪ್ರಕಾರ: ಅರವಿಂದ, ಅಶೋಕ, ಚೂತ, ನವಮಲ್ಲಿಕಾ ಮತ್ತು ನೀಲೋತ್ಪಲ...ಇನ್ನೊಂದು ಮತದಲ್ಲಿ ಚಂಪಕ, ಚೂತ, ಕೇಸರ, ಕೇತಕ ಮತ್ತು ಬಿಲ್ವ.

संस्थिते कर्मणि — (ಇದೊಂದು सतिसप्तमी) ಕಾರ್ಯ ಮುಗಿದಿರಲು ಕರ್ಮ — ಯಜ್ಞಾದಿಕವು प्रियादर्शनादृते-ಪ್ರಿಯೆಯ ದರ್ಶನದ ಹೊರತು (ऋते-ಹೊರತು) ಇದೊಂದು ಅವ್ಯಯ. ಇದರೊಂದಿಗೆ ಪಂಚಮೀವಿಭಕ್ತಿಯಲ್ಲಿರುವ ನಾಮಪದ ಬರುತ್ತದೆ.

ಆದುದರಿಂದಲೆ 'प्रियादर्शनात्' ಎಂದು ಬಂದಿರುವುದು.

गमयति—गम्—गच्छ—ಧಾತುವಿನ ಣಿಜಂತ (ಪ್ರೇರಣಾರ್ಥಕ ರೂಪ) '

परिक्षिप्त—ಸುತ್ತುವರಿಯಲ್ಪಟ್ಟ अहो—ಪ್ರಶಂಸಾಸೂಚಕ

सुभगोऽयमुद्देशः—ಈ ಪ್ರದೇಶ ರಮ್ಯವಾಗಿದೆ.

विटपान्तरेण—ಕೊಂಬೆಗಳ ಮಧ್ಯದಿಂದ.

लब्धं नेत्रनिर्वाणम्—ನಯನಾನಂದಪ್ರಾಪ್ತಿಯಾಯಿತು.

विश्रम्भकथितानि—ಆಪ್ತಾಲಾಪಗಳು.

(ಪುಟ 26)

किमयमातपदोषः स्यात्। उत......—ಇದೇನು ಗ್ರೀಷ್ಮತಾಪದ ಪರಿಣಾಮವೋ ಅಥವಾ ಕಾಮತಾಪದ ಪರಿಣಾಮವೋ.

कृतं सन्देहेन—ಸಂದೇಹ ಇನ್ನೇಕೆ ? ಕ್ರಿಯಾ ವಿಶೇಷಣವಾಗಿ कृतं ಬಂದಿರುವುದರಿಂದ सन्देहेन ಎಂಬ ತೃತೀಯಾ ವಿಭಕ್ತ್ಯಂತ ಪದ ಬಂದಿದೆ.

तस्य राजर्षेः—ದುಷ್ಯಂತನೇ ಇಲ್ಲಿ ರಾಜರ್ಷಿ ಎಂದು ಹೇಳಲ್ಪಟ್ಟಿರುವುದು राजा चासौ ऋषिश्च—(ಕರ್ಮಧಾರಯ) ಇಬ್ಬರ ಗುಣಗಳೂ ಅವನಲ್ಲಿ ನೆಲೆಸಿವೆ. ಆದುದರಿಂದಲೇ ಅವನು ಮಹಾನುಭಾವ.

प्रक्ष्यामि—प्रच्छ् ಧಾತುವಿನ ಭವಿಷ್ಯತ್ ಉತ್ತಮ ಪು. ಏಕವಚನ ರೂಪ.

प्रष्टव्या—प्रच्छ् ಧಾತುವಿನ ತವ್ಯ ಪ್ರತ್ಯಯಾಂತವಾದ ಸ್ತ್ರೀಲಿಂಗ ಏಕವಚನ ರೂಪ.

वक्तुकामा—ಹೇಳಲು ಇಚ್ಛೆಯಿರುವವಳು. तुम् ಅಂತವಾದ ಅಪೂರ್ಣ ಕ್ರಿಯಾ ಪದಗಳ ಮುಂದೆ काम ಅಥವಾ मनस् ಎಂಬ ಪದಗಳು ಬಂದಾಗ म् ಲೋಪವಾಗುತ್ತದೆ. 'तुं काममनसोरपि।'

अनभ्यन्तरे—ಪ್ರವೇಶವಿಲ್ಲದವರು. ಅಂದರೆ ನಮಗೆ ಸ್ತ್ರೀ-ಪುರುಷರ ಪ್ರೇಮದ ವಿಚಾರ ಅಷ್ಟು ತಿಳಿಯದು.

विकारं खलु परमार्थतः अज्ञात्वा .......—ಅಸ್ವಸ್ಥತೆಯ ಕಾರಣವನ್ನು ಸಂಪೂರ್ಣವಾಗಿ ತಿಳಿಯದೇ ಪ್ರತೀಕಾರವನ್ನು ಹುಡುಕುವುದು ಸಾಧ್ಯವಿಲ್ಲ; ಉಚಿತವೂ ಅಲ್ಲ. ರೋಗವನ್ನು ತಿಳಿಯದೇ ಔಷಧವನ್ನು ಕೊಡುವುದು ಹೇಗೆ ?

न हि स्वाभिप्रायेण मे दर्शनम्—ದುಷ್ಯಂತನ ಅರ್ಥ ತಾನು ಶಕುಂತಲೆಯ ಅಸ್ವಸ್ಥತೆಯ ಕಾರಣವನ್ನು 'ಮದನ ಬಾಧೆ'ಯೆಂದು ಅನುಮಾನಿಸಿದುದು ತನ್ನ ಅಭಿಲಾಷೆಗೆ ಸಮಂಜಸ ಮಾತ್ರವಲ್ಲ ಬೇರೆಯವರ ಅಭಿಪ್ರಾಯವೂ ಅದೇ ಆಗಿದೆ, ಎಂದು. ಏಕೆಂದರೆ ಆವಳ ಆಪ್ತ ಸಖಿಯರೂ ಹಾಗೆ ಊಹಿಸಿದ್ದಾರೆ.

बलवान्खलु मेऽभिनिवेशः........—ನನ್ನ ಅಭಿಲಾಷೆ ತೀವ್ರವಾಗಿದೆ. ಆದರೂ ನಾನು ಹೊರಗಡೆಹಲಾರೆ. ಅಂತರ್ಯಕ್ಕೆ ಉಮ್ಮಳವನ್ನುಂಟುಮಾಡಿ ಶರೀರವನ್ನೇ ಕಾಮಜ್ವರವು ಶೋಷಿಸುತ್ತಿದ್ದರೂ, ಸಂಗಾತಿಗಳ ನಿಷ್ಕಪಟ ಮೈತ್ರಿಯ ಒತ್ತಾಯ ಬಂದರೂ ಮಾನಿನಿಯಾದ ಶಕುಂತಲೆ ತಕ್ಷಣ ತನ್ನ ಹೃದಯದ ಆಶ್ರಯವನ್ನು ಆಪ್ತಸಖಿಯರಿಗೆ ವಿವರಿಸಲು ಅಶಕ್ತಳಾಗಿದ್ದಾಳೆ. ಲಜ್ಜೆಯ ಜೊತೆಗೆ ಮತ್ತೊಂದು ಸಂಕೋಚ. 'ಆಯಾಸಯಿತ್ರೀದಾನೀಂ ಭವಷ್ಯಾಮಿ' ಎಂದು, ಉತ್ತಮ ಸೌಜನ್ಯ, ಗೆಳೆತನಕ್ಕೆ ಅನುಪಮ ದೃಷ್ಟಾಂತ.

परिहीयसे अङ्गैः—ನಿನ್ನ ಅಂಗಗಳು ನವೆದು ಕೃಶವಾಗುತ್ತಿವೆ. (ಹೀಗಾಗುವುದು ವಿರಹ ತಾಪದ ಒಂದು ಪರಿಣಾಮ.)

लावण्यमयी छाया—ಲಾವಣ್ಯ ಪೂರ್ಣಕಾಂತಿ (छाया = ಕಾಂತಿ).

(ಪುಟ 27)

स्निग्धजनसंविभक्तं—ಪ್ರಿಯಸ್ನೇಹಿತರೊಡನೆ ಹಂಚಿಕೊಂಡಾಗ ದುಃಖದ ತೀವ್ರತೆ ಸಹ್ಯವಾಗುತ್ತದೆ. [ಹೋಲಿಸಿ ನೋಡಿ :

आवेदय ममात्मीयं पुत्रदुःखं सुदुःसहम्। मयि संक्रान्तमेतत्ते येन सह्यं भविष्यति ॥ ನಾಗಾನಂದ, ಅಂಕ 5.]

दर्शनपथम् — दर्शनस्य पन्थाः, तम्; पथिन ಶಬ್ದವು 'ನಕಾರಾಂತ'. ಆದರೆ ಸಮಾಸದ ಕೊನೆಯಲ್ಲಿ 'ಅ' ಕಾರಾಂತವಾಗುತ್ತದೆ. "ऋक्पूरब्धूः पथामानक्षे"।

प्रभृति—ಮೊದಲ್ಗೊಂಡು.

इत्यर्धोक्तेन लज्जां नाटयति—ಶಕುಂತಲೆಯ ಪಾತ್ರಚಿತ್ರಣ ಎಷ್ಟು ಕೋಮಲವಾಗಿದೆ; ಗಮನಿಸಿ. ಕಾಮಜ್ವರವನ್ನು ಒಳಗೇ ನುಂಗಿಕೊಂಡು ನರಳುತ್ತಿದ್ದರೂ, ನವೆಯುತ್ತಿದ್ದರೂ ಎಂತಹ ಮಧುರಲಜ್ಜೆ, ಸಂಕೋಚ.

अन्यथा अवश्यं सिञ्चतं मे तिलोदकम्—ಹಾಗಿಲ್ಲದಿದ್ದರೆ ನನಗೆ ಎಳ್ಳು-ನೀರು ಬಿಡಿ. ತಿಲೋದಕವು ಮೃತರಿಗೆ ಸಂಸ್ಕಾರ ಕಾಲದಲ್ಲಿ ಕೊಡುವ ತರ್ಪಣ ಜಲ. 'ತಪೋವನ ರಕ್ಷಕನಾದ ರಾಜರ್ಷಿಯ ಒಲುಮೆಯನ್ನು ಗಳಿಸಿಕೊಡದಿದ್ದರೆ ತನಗೆ ಮರಣ ಸಿದ್ಧ' ಎಂದು ಶಕುಂತಲೆಯ ಅರ್ಥ.

अनसूये दूरगतमन्मथा इत्यादि—'ಇವಳ ಕಾಮಾವಸ್ಥೆ ತೀವ್ರವಾಗಿದೆ. ಕಾಲ ಹರಣವನ್ನು ಇವಳು ಸಹಿಸುವಂತಿಲ್ಲ.' ಅನಸೂಯೆ ಮತ್ತು ಪ್ರಿಯಂವದೆ ಇವರಿಬ್ಬರೂ ಆದರ್ಶ ಸಂಗಾತಿಗಳು. ನಿಷ್ಕಪಟ ಮೈತ್ರಿಯ ಸಂದಾದೀಪಗಳು. ಆ ಶ್ರೇಷ್ಠ ನಾಯಿಕೆಗೆ ಈ ಉದಾತ್ತ ಮೈತ್ರಿಯ ಸಂಗಾತಿಗಳು ಅಭಿರಾಮ ರಾಗಿದ್ದಾರೆ.

सागरमुज्झित्वा इत्यादि — ಸಾಗರಕ್ಕಲ್ಲದೆ ಮಹಾನದಿ ಇನ್ನೆಲ್ಲಿ ತಾನೇ ಹೋಗಿ ಸೇರೀತು? ಉತ್ತಮ ಉಪಮೆಗಳಿಗೆ ಕಾಳಿದಾಸ ಆಕರನೆಂಬುದು ಮುಂದೆ ಹೇಳುವ ಮೂರು ಉಪಮೆಗಳಿಂದ ಸ್ಪಷ್ಟವಾಗುತ್ತದೆ. ಪ್ರಿಯಂವದೆ, ಅನಸೂಯೆ ಮತ್ತು ರಾಜ—ಈ ಮೂವರೂ ತಮ್ಮ ಸಂಸ್ಕಾರಕ್ಕೆ ಹೊಂದುವ ಒಂದೊಂದು ಉಪಮೆಗಳನ್ನು ಕೊಟ್ಟು 'ಶಕುಂತಲೆಯು ರಾಜನನ್ನು ಪ್ರೇಮಿಸಿದುದು ಯುಕ್ತ' ವೆಂದು ಸ್ಪಷ್ಟೀಕರಿಸಿದ್ದಾರೆ.

इदानीं सहकारमन्तरेण........... — ಪಲ್ಲವಿತವಾಗಿರುವ ಅತಿಮುಕ್ತ ಬಳ್ಳಿಯ ಆಲಿಂಗನಕ್ಕೆ ಸಹಕಾರ ವೃಕ್ಷವಲ್ಲದೆ ಬೇರೆ ಯಾವ ವೃಕ್ಷ ಅರ್ಹತೆ ಪಡೆಯ ಬಲ್ಲದು? ಅಂದರೆ 'ಶಕುಂತಲೆಯ ಪಾಣಿಗ್ರಹಣಕ್ಕೆ ದುಷ್ಯಂತನು ಮಾತ್ರ ಅರ್ಹ' ಎನ್ನುವ ಭಾವ.

किमत्र... यदि विशाखे—ಇತ್ಯಾದಿ: ವಿಶಾಖಾ ನಕ್ಷತ್ರದ್ವಯವು ಚಂದ್ರಲೇಖೆಯನ್ನು ಅನುಸರಿಸುವುದು ಸ್ವಾಭಾವಿಕ. ಅದರಲ್ಲಿ ವಿಚಿತ್ರವೇನು? ಶಕುಂತಲೆಯನ್ನು ಚಂದ್ರಲೇಖೆಗೂ ಅನಸೂಯಾ ಪ್ರಿಯಂವದೆಯರನ್ನು ವಿಶಾಖಾ ಯಮಳ ನಕ್ಷತ್ರಕ್ಕೂ ಹೋಲಿಸಿದೆ. ರಾಜನ ಅರ್ಥ—ವಿಶಾಖಾ ನಕ್ಷತ್ರಗಳು ಚಂದ್ರನನ್ನು ಅನುಸರಿಸುವಂತೆ ಈ ಇಬ್ಬರು ಸಖಿಯರೂ ಶಕುಂತಲೆಯ ಅಭಿಪ್ರಾಯವನ್ನೇ ಅನುಸರಿಸುತ್ತಿದ್ದಾರೆ.

विशाखे, चन्द्रलेखा ಈ ಪದಗಳ ಲಿಂಗ ವಚನಗಳನ್ನೂ ಇದು ರಾಜನು ಹೇಳುವ ಮಾತು ಎಂಬುದನ್ನೂ ಗಮನಿಸಿದರೆ ಇದರ ಔಚಿತ್ಯ ಸ್ಪಷ್ಟವಾಗುವುದು.

निभृतम्—ಗುಟ್ಟಾಗಿ. ಬೇಗಮಾಡುವುದು ಕಷ್ಟವಲ್ಲ. ಗುಟ್ಟಾಗಿ ಮಾಡಬೇಕಾಗಿರು ವುದೇ ಕಷ್ಟ.

(ಪುಟ 28)

ननु स राजर्षिः ಇತ್ಯಾದಿ—ರಾಜನೂ ತನ್ನ ಹೃದಯತಾಪವನ್ನು ಒಳಗೇ ನುಂಗಿ ಕೊಂಡು ನವೆಯುತ್ತಾ ಇರುವುದನ್ನು ಆಗಲೇ ಪ್ರಿಯಂವದೆಯು ಗಮನಿಸಿಯೇ

ಇದ್ದಾಳೆ. ಅವನು ಬಂದ ದಿನಕ್ಕೂ ಈಗಿಗೂ ಅವನ ದೇಹ ಕೃಶಗೊಂಡಿರುವುದೇ ಸಾಕ್ಷಿ. ಶಕುಂತಲೆಯ ಸ್ಥಿತಿಗತಿಗಳನ್ನು ವಿಚಾರಿಸಲಾದರೋ ತಾವೇ ಇದ್ದಾರೆ. ಆದರೆ ಪಾಪ! ರಾಜನ ಅಂತರ್ಯದ ಉಮ್ಮಳವನ್ನು ವಿಚಾರಿಸುವವರು ಇಲ್ಲಿ ಯಾರು ?

प्रजागरकृशः—ನಿದ್ದೆಯೇ ಬಾರದೆ ನವೆಯುತ್ತಿರುವವನು.

मदनलेखः—ಪ್ರೇಮ ಪತ್ರ.

सुमनोगोपितं—(ದೇವತಾ ಪ್ರಸಾದ) ಪುಷ್ಪಗಳಲ್ಲಿ ಮುಚ್ಚಿಟ್ಟ.

अपदेशेन—ನೆಪದಿಂದ.

रोचते मे—ರುಚ್ಯರ್ಥಕ ಧಾತುಗಳ ಯೋಗವಿದ್ದಲ್ಲಿ ಯಾರಿಗೆ ರುಚಿಸುತ್ತದೆಯೋ ಅವರನ್ನು ಸೂಚಿಸುವ ಪದ ಚತುರ್ಥೀ ವಿಭಕ್ತಿಯಲ್ಲಿರುತ್ತದೆ. रुच्यर्थानां प्रीयमाणः ।

सुकुमारः—ಮುದ್ದಾದ.

किं नियोगो वां विकल्पयते — 'ಸಖಿಯರ ಆದೇಶವನ್ನು ಬದಲಾಯಿಸುವೆನೇ ?' ಅಂದರೆ 'ನಿಮ್ಮ ತೀರ್ಮಾನವನ್ನು ಒಪ್ಪಿದೆ' ಎಂದರ್ಥ.

अवधीरणाभीरुकं—ಇದು हृदयं ಎಂಬುದಕ್ಕೆ ವಿಶೇಷಣ. ಎಲ್ಲಿ ತಿರಸ್ಕೃತಗಳಾಗಿ ಬಿಟ್ಟೇನೋ ಎಂಬ ಹೆದರಿಕೆಯಿಂದ ಕೂಡಿದ ಹೃದಯ ; ಹಿಂದೆ ರಾಜನು ಹಾಗೆ ಭಾವಿಸಿ ಭೀತನಾಗಿದ್ದನು ; ಈಗ ಶಕುಂತಲೆಯೂ ಅದೇ ಭಾವನೆಯಿಂದ ಭೀತಳಾಗಿದ್ದಾಳೆ. ಅದಕ್ಕೆ ರಾಜನ ಉತ್ತರ ಬಹು ಸಮಂಜಸವಾಗಿದೆ.

ಪದ್ಯ 3 (ಅನ್ವಯ) हे भीरु, यतः अवधीरणां विशङ्कसे सः अयं सङ्गमोत्सुकः तिष्ठति । प्रार्थयिता श्रियं लभेत वा न (लभेत); (अपि तु) श्रिया ईप्सितः दुरापः कथं भवेत ?

'ಎಲೈ ಭಯಶೀಲೆ, ಯಾರಿಂದ ನೀನು ತಿರಸ್ಕಾರವು ಒದಗಬಹುದೆಂದು ಭೀತಳಾಗಿದ್ದೀಯೋ ಆ ನಾನು ನಿನ್ನ ಸಂಗಮಕ್ಕೆ ಹಾತೊರೆಯುತ್ತಾ ಕಾಯುತ್ತಿದ್ದೇನೆ. ಪ್ರಾರ್ಥಿಸಿದವನಿಗೆ ಲಕ್ಷ್ಮಿ ಒಲಿಯಬಹುದು–ಬಿಡಬಹುದು. ಆದರೆ ಲಕ್ಷ್ಮಿಯೇ ಅನುಗ್ರಹಮಾಡಲು ಮುಂದೆ ಬಂದಾಗ ಅವಳಿಗೆ ಪ್ರಾರ್ಥಿಸಲ್ಪಟ್ಟವನು ದೊರೆಯುವುದು ಕಷ್ಟವೇ ?' ಆದುದರಿಂದ ನಿನ್ನ ಸಮಾಗಮಪ್ರಾರ್ಥನೆಯನ್ನು ಯಾರು ತಿರಸ್ಕರಿಸಿಯಾರು ?

भीरु—ಭಯಶೀಲೆ ; अवधीरणा—ತಿರಸ್ಕಾರ.

दुरापः—दुःखेन आप्तुं साध्यं — ಈ ಮೇಲಿನ ಅಭಿಪ್ರಾಯವನ್ನೇ ಹೋಲುವ ವಾಕ್ಯವು ಕುಮಾರಸಂಭವದಲ್ಲೂ ಬಂದಿದೆ. ಗಮನಿಸಿ : 'न रत्नमन्विष्यति मृग्यते हि तत्' ಮಧುರವಾದ ಭಾವ, ಹೃದ್ಯವಾದ ಶೈಲಿ.

अयि आत्मगुणावमानिनि — ತನ್ನ ಗುಣವನ್ನು ಕಡೆಗಣಿಸುವವಳೇ. आत्मनः गुणान् अवमानयति (अवजानाति) या, तत्संबुद्धिः । क इदानीं शरीरनिर्वापयित्रीं शारदीं ज्योत्स्नां पटान्तेन वारयति· 'ಶರೀರ ತಾಪಹರವೂ, ಹರ್ಷದಾಯಕವೂ ಆದ ಶರತ್ಕಾಲದ ಬೆಳದಿಂಗಳನ್ನು ಯಾರು ತಾನೆ ವಸ್ತ್ರದ ಕೊನೆಯಿಂದ ಅಡಗಿಸುತ್ತಾರೆ?' ಅಂದರೆ, 'ಮದನ ತಾಪಹಾರಿಣಿಯಾದ ನಿನ್ನ ಪ್ರೇಮವನ್ನು ಯಾವ ಪ್ರಿಯತಮನು ತಾನೇ ತಿರಸ್ಕರಿಸುತ್ತಾನೆ ?' ಎನ್ನುವ ಅರ್ಥ.

निर्वापयित्री—ಆನಂದದಾಯಕವಾದ.

शारदीं—ಶರತ್ಕಾಲದ. शरदः इयं, शारदी, तां शारदीम ।

ज्योत्स्ना—ಬೆಳದಿಂಗಳು.

पटान्तेन—ವಸ್ತ್ರದ ಕೊನೆಯಿಂದ.

ಪದ್ಯ 4 (ಅನ್ವಯ) पदानि रचयन्त्याः अस्याः उन्नमितैकभ्रूलतम् आननं कण्टकितेन कपोलेन मयि अनुरागं प्रथयति ॥

'ಪ್ರೇಮಪತ್ರಕ್ಕೆ ಉಚಿತವಾದ ಮಧುರ ಪದ ವಿನ್ಯಾಸವನ್ನು ಯೋಚಿಸುತ್ತಾ ಇದ್ದ ಶಕುಂತಲೆಯ ಕಪೋಲಗಳಲ್ಲಿ ಪ್ರೇಮದ ಕಂಪಿನಿಂದ ರೋಮಾಂಚ ಮೂಡಿತು. ಇದು ರಾಜನಾದ ದುಷ್ಯಂತನಲ್ಲಿ ಆವಳ ಅನುರಾಗಪೂರ್ಣಭಾವನೆಯನ್ನು ಸುವ್ಯಕ್ತಗೊಳಿಸುವಂತಿತ್ತು.'

कण्टकितेन—ರೋಮಾಂಚದಿಂದ.

अनुरागं प्रथयति — 'ಅನುರಾಗವನ್ನು ವ್ಯಕ್ತಪಡಿಸುತ್ತಿದೆ'. ಪ್ರೇಮಪತ್ರಕ್ಕಿಂತ ಅವನನ್ನು ನೆನೆದಕೂಡಲೆ ಶಕುಂತಲೆಯಲ್ಲಿ ಮೂಡಿದ ಮನೋಜ್ಞ ರೋಮಾಂಚ ರಾಜನಿಗೆ ಅವಳ ಪ್ರೇಮದ ವಿಷಯದಲ್ಲಿ ನಿಸ್ಸಂದೇಹವಾದ ಆಶ್ವಾಸನೆ ಕೊಡುತ್ತದೆ. ಏಕೆಂದರೆ ಅದೊಂದು ಹೃದಯಘೋಷಣೆ. ಪದಬಂಧ ಮೋಸ ಮಾಡಬಹುದು. ಹೃದಯಬಂಧ ಹಾಗಲ್ಲ.

(ಪುಟ 29)

अवहिते स्वः—(ನಾವಿಬ್ಬರೂ) ಸಿದ್ಧವಾಗಿದ್ದೇವೆ.

ಪದ್ಯ 5 (ಅನ್ವಯ) हे निर्घृण, तव हृदयं न जाने ; पुनः त्वयि वृत्तमनोरथायाः मम अङ्गानि कामः दिवापि रात्रौ अपि बलीयः तपति ॥

'ಎಲೈ ನಿರ್ದಯಿಯೇ ನಿನ್ನ ಹೃದಯದ ಭಾವವೇನೋ ನನಗೆ ತಿಳಿಯದು; ನಿನ್ನ ಪ್ರೇಮವನ್ನು ಬಯಸುತ್ತಲಿರುವ ನನ್ನನ್ನು ಸದಾಕಾಲದಲ್ಲಿಯೂ ಮನ್ಮಥನು ಸಹಿಸಲಾರದಷ್ಟು ಶೋಷಿಸುತ್ತಲಿದ್ದಾನೆ.'

—ಇದು ಶಕುಂತಲೆ ಬರೆದ ಪ್ರೇಮ ಪತ್ರ.

निर्घृणः — ದಯೆಯಿಲ್ಲದವನು (ಕಠಿಣಹೃದಯ) ಇಷ್ಟು ಅನುರಾಗದಿಂದ ಕೂಡಿದ ತನ್ನನ್ನು ನಿರ್ಲಕ್ಷಿಸಿದ್ದಾನೆಂದು ಮೃದುವಾಗಿ ನಿಂದಿಸಿದ್ದಾಳೆ.

त्वयि वृत्तमनोरथायाः—ಈ ಮಾತು ಶಕುಂತಲೆಯ ನಿಷ್ಕಳಂಕ ಪ್ರೇಮದ ಗುರುತು. ಇಂತಹ ವಿಶುದ್ಧ ಪ್ರೇಮವನ್ನೇ ಕಾಳಿದಾಸ ಅಮರವನ್ನಾಗಿ ತನ್ನ ಕಾವ್ಯದಲ್ಲಿ ಹಾಡಿರುವುದು. ಇದೇ ಭಾವಕ್ಕೆ ಕುಮಾರ ಸಂಭವದಲ್ಲಿ ಬರುವ ಶಿವನನ್ನು ಕುರಿತ ಪಾರ್ವತಿಯ ಮಾತನ್ನು ಗಮನಿಸಿ : "ममात्र भावैकरसं मनः". (ಸರ್ಗ 5 ಶ್ಲೋಕ 72).

ಪದ್ಯ 6 (ಅನ್ವಯ) हे तनुगात्रि, मदनः त्वां तपति मां तु पुनः सः अनिशं दहत्येव । हि, यथा शशाङ्कं तथा कुमुद्वतीं दिवसः न ग्लपयति ॥

'ಎಲೈ ಕೃಶಾಂಗಿಯೆ, ಮನ್ಮಥನು ನಿನ್ನನ್ನು ತಾಪಕ್ಕೆ ಮಾತ್ರ ಈಡು ಮಾಡಿದ್ದಾನೆ. ಆದರೆ ನನ್ನನ್ನು ನಿರಂತರ ದಹಿಸುತ್ತಲೇ ಇದ್ದಾನೆ. ಹಗಲು, ಚಂದ್ರನಿಗೆ ಪೀಡೆಯನ್ನು ತಂದಷ್ಟು ಕನ್ನೈದಿಲೆಗೆ ತರಲಾರದು.'

अनिशं—ನಿರಂತರ. ಈ ಶ್ಲೋಕದಲ್ಲಿ ದುಷ್ಯಂತನು ತನ್ನ ಪ್ರೇಮವನ್ನು ಘೋಷಿಸಿದ್ದಾನೆ. ಇಲ್ಲಿ ಬಂದಿರುವ तपति ಮತ್ತು दहति ಎನ್ನುವ ಪದಗಳು ಬಹು ಅರ್ಥಗರ್ಭಿತವಾಗಿವೆ. ಇಂತಹುದೇ ಸಂದರ್ಭವು ವಿಕ್ರಮೋರ್ವಶೀಯ'ದಲ್ಲೂ ವರ್ಣಿತವಾಗಿದೆ : "पर्युत्सुकां कथयसि प्रियदर्शनां ताम् आर्तं न पश्यसि पुरूरवसं तदर्थे ।" ಅಂಕ 2 ಶ್ಲೋಕ 16.

विवक्षितं हि अनुक्तं ಇತ್ಯಾದಿ — ಹೇಳಲಿಚ್ಛಿಸಿರುವುದನ್ನು ಹೇಳದೇ ಹೋದರೆ ಪಶ್ಚಾತ್ತಾಪ ಪಡಬೇಕಾಗುತ್ತದೆ. विवक्षितं-वच् ಧಾತುವಿನ ಸನ್ನಂತ (ಇಚ್ಛಾರ್ಥಕ) ರೂಪ.

विषयनिवासिनः—ತನ್ನ ರಾಜ್ಯದಲ್ಲಿ ವಾಸಿಸುವ "ಪ್ರಜೆಗಳ."

आर्ति—ಪೀಡೆ. अवस्थान्तरं—अन्या अवस्था.

(ಪುಟ 30)

साधारणोऽयं प्रणयः — ಈ ಪ್ರಾರ್ಥನೆ ಇಬ್ಬರಿಗೂ ಅನ್ವಯವಾಗುವುದು. 'ನಾನು ಅನುಗ್ರಹಮಾಡಿ ನಿಮ್ಮ ಸಖಿಯ ಪ್ರಾಣರಕ್ಷಣೆ ಮಾಡಬೇಕೆಂಬುದು ನಿನ್ನ ಆಸೆ; ಅವಳು ಅನುಗ್ರಹಿಸಿ ನನ್ನ ಪ್ರಾಣವನ್ನು ಉಳಿಸಬೇಕೆಂದು ನನ್ನ ಪ್ರಾರ್ಥನೆ.'

किमन्तःपुरविरहपर्युत्सुकस्य .... ಇತ್ಯಾದಿ — ಅಂತಃಪುರದ ಸ್ತ್ರೀಯರನ್ನು ಬಿಟ್ಟು ದೂರ ಬಂದಿರುವುದರಿಂದ ಪರ್ಯುತ್ಸುಕವಾಗಿರುವ ರಾಜರ್ಷಿಯನ್ನು ಒತ್ತಾಯ ಮಾಡಿ ಫಲವೇನು ?" ರಾಜನ ಅನುರಾಗವನ್ನು ಕೆಣಕಿ ತನ್ನನ್ನೇ ಅವನು ಪ್ರೇಮಿಸುತ್ತಾನೆಂಬ ದೃಢ ಆಶ್ವಾಸನೆಯನ್ನು ಪಡೆಯಲೋಸುಗ ಶಕುಂತಲೆಯು ಆಡಿದ ಮನೋಜ್ಞ ವಾಕ್ಯವಿದು. उपरोध—ಬಲಾತ್ಕಾರ.

ಪದ್ಯ 7 (ಅನ್ವಯ) (हे) हृदयसन्निहिते, अनन्यपरायणं इदं मम हृदयं यदि अन्यथा समर्थयसे, (तर्हि हे) मदिरेक्षणे मदनबाणहतः अहं पुनः (त्वया हतः भवेयम्).

'ಎಲೈ ಪ್ರಿಯತಮೆ, ನನ್ನ ಅನುರಾಗವನ್ನು ನೀನು ಸಂದೇಹಿಸಿದರೆ ಈಗಾಗಲೇ ಮನ್ಮಥನ ಬಾಣದಿಂದ ಜರ್ಝರಿತನಾದ ನಾನು ಮತ್ತೆ ನಿನ್ನ ವಾಗ್ಬಾಣದಿಂದ ಹತನಾದಂತೆಯೇ.' ಇದೊಂದು ಸುಂದರವಾದ ಶ್ಲೋಕ. ತನಗೆ ಶಕುಂತಲೆಯಲ್ಲಿ ಅಲ್ಲದೇ ಬೇರಾರಲ್ಲಿಯೂ ಇಂತಹ ಪ್ರೇಮವಿಲ್ಲವೆಂದು ದುಷ್ಯಂತನು ಈ ರೀತಿ ಸೂಚಿಸುತ್ತಾನೆ.

मदिरेक्षणा—ಉನ್ಮಾದಕ ಕಣ್ಣುಗಳುಳ್ಳವಳು. ಶಕುಂತಲೆ, ತನ್ನ ಹೃದಯ ಪ್ರೇಯಸಿಯಾಗಿದ್ದಾಳೆ, ಎಂಬುದನ್ನು ದುಷ್ಯಂತನು ಕಾವ್ಯಮಯವಾಗಿ ಹೇಳಿದ್ದಾನೆ.

वयस्य, बहुवल्लभा राजानः श्रूयन्ते .... ಇತ್ಯಾದಿ — "ರಾಜನಿಗೆ ಬಹುಜನ ಪತ್ನಿಯರು ಎಂದು ಕೇಳಿದ್ದೇವೆ." ಪ್ರಕೃತಿದೇವಿಯ ಶುಭ್ರಸನ್ನಿಧಿಯಲ್ಲಿ, ತಪೋವನದ ಪವಿತ್ರ ಪ್ರದೇಶದಲ್ಲಿ. ಪ್ರಿಯಸಖಿಯರ ಸಮಕ್ಷಮದಲ್ಲಿ ಶಕುಂತಲೆ ಮತ್ತು ದುಷ್ಯಂತ ಇವರಲ್ಲಿ ಹೃದಯೈಕ್ಯವಾಯಿತು. ಆದರೂ ಶಕುಂತಲೆಯನ್ನು ಒಂದು ಸಂಶಯ ಕಾಡುತ್ತಿತ್ತು. "किमन्तःपुरविरहपर्युत्सुकस्य राजर्षेरुपरोधेन" ಎಂದು ರಾಜನ ಅಂತಃಪುರದ ಮಾತನ್ನು ತೆಗೆದು ತನ್ನ ಸಂಶಯವನ್ನು ಸೂಚಿಸಿದಳು. ವ್ಯವಹಾರ ಕುಶಲೆಯಾದ ಅನಸೂಯೆಯು ಈ ಸೂಚನೆಯನ್ನು ಅರ್ಥಮಾಡಿಕೊಂಡು ಕೌಶಲದಿಂದ ರಾಜನಲ್ಲಿ ಹೀಗೆ ನಿವೇದಿಸಿಕೊಳ್ಳುತ್ತಾಳೆ. "ಪ್ರಿಯಮಿತ್ರ, 'ರಾಜರಿಗೆ ಬಹುಪತ್ನಿಯರು' ಎಂಬ ಮಾತನ್ನು ಕೇಳಿದ್ದೇವೆ. ನಮ್ಮ ಪ್ರಿಯಸಖಿ ಅನುತಾಪ ಪಡದಂತೆ ನಡೆದುಕೊ" ಎಂದು. ಅನುಸೂಯೆ ದುಷ್ಯಂತನನ್ನೇ ನಿನಗೆ ಬಹುಪತ್ನಿಯರಿರುತ್ತಾರೆ ಎಂದು ನೇರವಾಗಿ ವಿವರಿಸದೆ, 'ರಾಜರು ಬಹುಪತ್ನಿಯುಳ್ಳವರು' ಎಂಬ ಸಾಮಾನ್ಯ ಅಭಿಪ್ರಾಯವನ್ನು ತಿಳಿಸುತ್ತಾಳೆ. ಈ ಮಾತುಗಳು ಧ್ವನಿಪೂರ್ಣವಾಗಿವೆ. ಆಗಾಮಿ ಅಂಶಗಳನ್ನು ಸೂಚಿಸುತ್ತವೆ.

ಪದ್ಯ 8 (ಅನ್ವಯ) परिग्रहबहुत्वेऽपि मे कुलस्य द्वे प्रतिष्ठे । समुद्ररसना उर्वी च युवयोः इयं सखी च ॥

'ನನಗೆ ಅನೇಕ ಪತ್ನಿಯರಿರಬಹುದು; ಆದರೆ ಅವರಲ್ಲೆಲ್ಲಾ ನನ್ನ ವಂಶದಲ್ಲಿ ಪ್ರತಿಷ್ಠಿತರಾಗಬಲ್ಲವರು ಇಬ್ಬರು ಮಾತ್ರ (1) ಸಮುದ್ರಗಳನ್ನೇ ಒಡ್ಯಾಣವಾಗಿ ಉಳ್ಳ ಧರಿತ್ರೀ ಮತ್ತು (2) ಈ ನಿಮ್ಮ ಪ್ರಿಯಸಖಿ.'

परिग्रह—ವಿವಾಹ. ಪಾಣಿಗ್ರಹಣಕ್ಕೆ ಮುನ್ನ ಆದ ಧೀರೋದಾತ್ತ ಒಪ್ಪಂದವಿದು. ಇದರಿಂದ ಶಕುಂತಲೆಗೂ ಅವಳ ಪ್ರಿಯಸಖಿಯರಿಗೂ ಧೈರ್ಯ ಮತ್ತು ಸಂತೃಪ್ತಿ ಉಂಟಾಗುತ್ತದೆ.

समुद्ररसना उर्वी—ನಾಲ್ಕು ಸಮುದ್ರಗಳನ್ನೇ ಒಡ್ಯಾಣವಾಗಿ ಧರಿಸಿರುವ ಭೂಮಿ. ರಾಜರನ್ನು ಭೂಪತಿಯೆಂದು ಕರೆಯುವುದು ರೂಢಿಯಲ್ಲಿದೆ. ಪ್ರತಿಯೊಬ್ಬ ರಾಜನಿಗೂ ಭೂಮಿ ಪತ್ನಿಯೆ.

ಪದ್ಯ 9 (ಅನ್ವಯ) शीतलैः क्लमविनोदिभिः नलिनीदलतालवृन्तैः आर्द्रवातान् सञ्चारयामि किम् ? उत (हे) करभोरु ते पद्मताम्रौ चरणौ अङ्के निधाय यथासुखं संवाहयामि किम् ॥

' ಸುಂದರಿ, ಕಮಲದ ಎಲೆಯೆಂಬ ಬೀಸಣಿಗೆಯಿಂದ ತಣ್ಣನೆಯ ಗಾಳಿಯನ್ನು ಬೀಸಿ ನಿನ್ನ ಆಯಾಸವನ್ನು ಪರಿಹರಿಸಲೇ ಅಥವಾ ನಿನ್ನ ಸುಕೋಮಲ ಪಾದಗಳನ್ನು ಒತ್ತಲೇ ?" ಎಂದು ರಾಜನು ಶಕುಂತಲೆಯನ್ನು ಕೇಳುತ್ತಾನೆ. ಅವಳ ಆಪ್ತ ಸಖಿಯರು ಮಾಡುತ್ತಿದ್ದ ಸೇವೆಯನ್ನು ಚರಣದಾಸನಾಗಿ ತಾನೇ ಮಾಡಲು ಅವಕಾಶ ಕೊಡಬೇಕೆಂದು ರಾಜನ ಪ್ರಾರ್ಥನೆ. ಪ್ರೇಮಿಗಳಲ್ಲಿ ಇದೇನು ತಪ್ಪೆನ್ನುವಂತಿಲ್ಲ.

तालवृन्तम्—ಬೀಸಣಿಗೆ.

करभोरूः—करभ इव ऊरू यस्याः सा, करभोरूः तत्सम्बुद्धौ करभोरु

(ಪುಟ 31)

न माननीयेषु आत्मानं अपराधयिष्यामि—" ಗೌರವಾರ್ಹರಾದವರಲ್ಲಿ ನಾನು ತಪ್ಪನ್ನೆಸಗಲಾರೆ ". ರಾಜನಾಗಿ, ಪ್ರಿಯತಮನಾಗಿ ದುಷ್ಯಂತ ಮಾನನೀಯ. ಅವನಿಂದ ಸೇವೆ ಮಾಡಿಸಿಕೊಳ್ಳುವುದೆ ?

अनिर्वाणो दिवसः—ಬಿಸಿಲಿನ ಬೇಗೆ ಇನ್ನೂ ಶಮನಗೊಂಡಿಲ್ಲ.

ಪದ್ಯ 10 (ಅನ್ವಯ) नलिनीदलकल्पितस्तनावरणं कुसुमशयनम् उत्सृज्य परिबाधापेलवैः अङ्गैः आतपे कथं गमिष्यसि ॥

' ಶರೀರದ ತಾಪವನ್ನು ಹೋಗಲಾಡಿಸಲು ಸಿದ್ಧಗೊಳಿಸಿದ್ದ ಪುಷ್ಪಶಯ್ಯೆಯನ್ನು ತ್ಯಜಿಸಿ ಬಿಸಿಲಿನಲ್ಲಿ ನೀನು ಹೇಗೆ ತಾನೇ ಹೋಗುತ್ತೀಯೆ.'

परिबाधापेलवैः—ಮದನಪೀಡೆಯಿಂದ ದುರ್ಬಲವಾದ पेलव ಕೋಮಲ.

पौरव, रक्ष विनयं—ಪುರುವಂಶಸೋಮನೆ, ' ಘನತೆಯನ್ನು (ಸಭ್ಯಾಚಾರವನ್ನು) ಉಳಿಸಿಕೊ ! ವಿವಾಹವಾಗದೆ ಕನ್ಯೆಯನ್ನು ಮುಟ್ಟಬಾರದು. ನಿನ್ನ ಪುರುವಂಶಕ್ಕೆ ಕಳಂಕ ತರಬಾರದು.

मदनसन्तप्तापि न खलु आत्मनः प्रभवामि—' ಕಾಮತಪ್ತಳಾಗಿದ್ದರೂ ನಾನು ಸ್ವೇಚ್ಛಾವಿಹಾರಿಣಿಯಲ್ಲ.' ರಾಜನನ್ನು ಪೌರವ ಎಂದು ಸಂಬೋಧಿಸಿ ಅವನ ಉಜ್ವಲ ವಂಶವನ್ನು ಜ್ಞಾಪಿಸುತ್ತಾಳೆ. ಜೊತೆಗೆ ತನ್ನ ಧರ್ಮವಾತ್ಸಲ್ಯ ಮತ್ತು ಸಂಯಮವನ್ನು ಮೆರೆಸಿದ್ದಾಳೆ.

विदितधर्मा — ಧರ್ಮನನ್ನು ಬಲ್ಲವನು. विदितः धर्मः येन सः — ಬಹುವ್ರೀಹಿ ಸಮಾಸದ ಕೊನೆಯಲ್ಲಿ 'ಧರ್ಮ' ಶಬ್ದವು ಕೇವಲ ಒಂದೇ ಪದ ಹಿಂದೆ ಬಂದರೆ (ಅಕಾರಾಂತ) ಧರ್ಮನ್ ಎಂದು 'ನ' ಕಾರಾಂತವಾಗುತ್ತದೆ. 'धर्मादनिच् केवलात्'—

ಪದ್ಯ 11 (ಅನ್ವಯ) बह्व्यः राजर्षिकन्यकाः गान्धर्वेण विवाहेन परिणीताः ताः पितृभिः अभिनन्दिताः च श्रूयन्ते ॥

'ಅನೇಕ ರಾಜರ್ಷಿಕನ್ಯೆಯರು ಗಾಂಧರ್ವ ವಿಧಿಯಂತೆ ಪಾಣಿಗ್ರಹಣ ಮಾಡಿಕೊಂಡು ತಂದೆ ತಾಯಿಯರ ಅಭಿನಂದನೆಯನ್ನು ಪಡೆದರು.'

राजर्षि कन्यकाः—राजानः ऋषयश्च राजर्षयः तेषां कन्यकाः ಅಥವಾ राजा चासौ ऋषिश्च राजर्षिः तेषां कन्यका ಎರಡು ಅರ್ಥಗಳೂ ಅನ್ವಯವಾಗಲೆಂದೇ 'ರಾಜರ್ಷಿಕನ್ಯಕಾಃ' ಎಂಬ ಸಮಾಸ ಪದವನ್ನು ಉಪಯೋಗಿಸಿರಬಹುದು. ಇವೆರಡೂ ಶಕುಂತಲೆಗೆ ಅನ್ವಯವಾಗುತ್ತವೆ.

गान्धर्वेण विवाहेन—ಗಾಂಧರ್ವ ವಿವಾಹ, ಶಾಸ್ತ್ರ ಒಪ್ಪಿರುವ ಎಂಟು ವಿವಾಹ ಪದ್ಧತಿಗಳಲ್ಲಿ ಒಂದು. ಇದೊಂದು ಬಹಿರಂಗವಲ್ಲದ ಸ್ವಯಂವರ. ಪ್ರಣಯಿಗಳು ಪರಸ್ಪರ ಪ್ರೇಮದಿಂದ ವಿವಾಹವಾಗುವುದು ಹಿರಿಯರ ಆಣತಿ ಅಭಿಪ್ರಾಯಗಳಾಗಲೀ ಶಾಸ್ತ್ರವಿಧಿಗಳಾಗಲೀ ಇದರಲ್ಲಿ ಇಲ್ಲ. ಶಕುಂತಲೆ ಪಾಣಿಗ್ರಹಣ ಶಾಸ್ತ್ರವಾದ ಹೊರತು ತನ್ನ ಪ್ರಬೋಧನೆಗಳಿಗೆ ಒಪ್ಪುವುದಿಲ್ಲವೆಂದು ಅವಳನ್ನು ಗಾಂಧರ್ವ ವಿವಾಹಕ್ಕೆ ರಾಜನು ಒಪ್ಪಿಸುತ್ತಾನೆ.

भूयोऽपि सखीजनमनुमानयिष्यामि—ಮತ್ತೊಮ್ಮೆ ಸಖಿಯರ ಒಪ್ಪಿಗೆಯನ್ನು ಪಡೆದು ಬರುತ್ತೇನೆ.

अनुमानयिष्यामि—मन् ಧಾತುವಿನ ಣಿಜಂತ ರೂಪ (ಲೃಟ್ ಉತ್ತಮ ಪುರುಷ ಏಕವಚನ) ಈ ವಾಕ್ಯ ಅವಳ ಮಾನಸಿಕ ಘರ್ಷಣೆಯನ್ನು ಸ್ಪಷ್ಟಪಡಿಸುತ್ತದೆ.

ಪದ್ಯ—12 (ಅನ್ವಯ) हे सुन्दरि, यावत् पिपासता मया अपरिक्षत-कोमलस्य ते अस्य अधरस्य रसः षट्पदेन नवस्य कुसुमस्य (रसः) इव सदयं गृह्यते ॥

पिपासता—पातुं इच्छता पा ಧಾತುವಿನ ಸನ್ನಂತರೂಪದ ಕೃದಂತ.

षट्पदः—ಭ್ರಮರ.

चक्रवाकवधुके आमन्त्रयस्व सहचरम् । उपस्थिता रजनी —ಎಲೈ ಚಕ್ರವಾಕ ವಧುವೇ, ನಿನ್ನ ಪ್ರಿಯತಮನನ್ನು ಬೀಳ್ಕೊಡು, ರಾತ್ರಿ ಸಮೀಪಿಸಿತು. ಅನಸೂಯೆ ಪ್ರಿಯಂವದೆಯರು ಗೌತಮಿಯ ಆಗಮನವನ್ನು ಈ ರೀತಿ ಸೂಚಿಸುತ್ತಾರೆ. ಚಕ್ರವಾಕಮಿಥುನ ಸಂಸ್ಕೃತ ಸಾಹಿತ್ಯದಲ್ಲಿ ಆದರ್ಶದಾಂಪತ್ಯಕ್ಕೆ ನಿದರ್ಶನವಾಗಿದೆ. ವಿಶೇಷವೆಂದರೆ ಹಗಲಿನಲ್ಲಿ ಅವು ಜೊತೆಗೂಡಿದ್ದು ರಾತ್ರಿಯಲ್ಲಿ ವಿರಹಗೊಂಡು

ಕೂಗುತ್ತಾ ಅನ್ಯೋನ್ಯ ಪ್ರೇಮವನ್ನು ಪ್ರಕಟಗೊಳಿಸುತ್ತವೆ. ಶಕುಂತಲೆ ದುಷ್ಯಂತ ಇಲ್ಲಿ ಚಕ್ರವಾಕ ಮಿಥುನ; ಗೌತಮಿಯೇ ರಜನಿ. ಅಂಕದ ಆದಿಯಲ್ಲಿ ಶಕುಂತಲೆಯು ಅಸ್ವಸ್ಥ ಸ್ಥಿತಿಯನ್ನು ತಿಳಿದ ಶಿಷ್ಯನು ಮಂತ್ರಪೂತಜಲವನ್ನು ಗೌತಮಿಯ ಸಂಗಡ ಕಳುಹಿಸುತ್ತೇನೆಂದು ತಿಳಿಸಿದ್ದ. ಸ್ವಾಭಾವಿಕವಾದ ಆ ಸಂಗತಿ ನಾಟಕದಲ್ಲಿ ಉತ್ತಮ ಪರಿಣಾಮವನ್ನು ತರಬಲ್ಲ ಪ್ರಸಂಗವಾಗಬಲ್ಲದು ಎಂಬುದು ಈಗ ಅರಿವಾಗುತ್ತದೆ. 'वधुक' ಎಂಬ ಪದದಲ್ಲಿ ಬಂದಿರುವ 'क' 'ಮುದ್ದಾದ' ಎಂಬರ್ಥವನ್ನು ಕೊಡಬಲ್ಲದು.

आर्ये अस्ति मे विशेषः—ಪೂಜ್ಯಳೇ ಈಗ ನನ್ನ ಆರೋಗ್ಯ ಸ್ವಲ್ಪ ಸುಧಾರಿಸಿದೆ.

अभ्युक्ष्य—(ಮಂತ್ರಪೂತ ಜಲವನ್ನು) ಚುಮುಕಿಸಿ.

हृदय, प्रथममेव सुखोपनते मनोरथे:....ಇತ್ಯಾದಿ–ಎಲೈ ಹೃದಯ (ಪ್ರಿಯತಮನು) ಸಮೀಪದಲ್ಲಿಯೇ ಇದ್ದಾಗ ಭಯ, ಲಜ್ಜೆಗಳಿಂದ ತುಂಬಿ ಮೌನವಾಗಿದ್ದೆ. ಈಗ ಸಮಾಗಮ ಭಗ್ನಗೊಂಡಾಗ ನೀನು ಏಕೆ ಪರಿತಪಿಸುವೆ. ಪ್ರೇಮಿಗಳು ಈ ವಿಧವಾಗಿ ಹೃದಯವನ್ನು ನಿಂದಿಸುವ ಪ್ರಸಂಗ ಸಂಸ್ಕೃತದ ಕೃತಿಗಳಲ್ಲಿ ಅಪರೂಪವಲ್ಲ.

सानुशयविघटितस्य........"ಅತ್ಯಂತ ದುಃಖದಿಂದ ವಿರಹಗೊಂಡಿರುವಳ." ಉತ್ತಮ ಅವಕಾಶ ದೊರೆತಾಗ ಲಜ್ಜೆ ಭಯದಿಂದ ಕೂಡಿದ್ದು ಪ್ರೇಮಿಗಳು ಬೇರ್ಪಟ್ಟಾಗ ಪರಸ್ಪರ ದರ್ಶನಕ್ಕಾಗಿ ಅಭೀಪ್ಸೆ ಪಡುವುದು ಸಹಜ.

आमन्त्रये—ಬೀಳ್ಕೊಡುತ್ತೇನೆ.

अहो! विघ्नवत्यः प्रार्थितार्थसिद्धयः — ಅಯ್ಯೋ ನಮ್ಮ ಇಷ್ಟಾರ್ಥಗಳನ್ನು ಪಡೆಯಬೇಕೆಂದಾಗ ಅದೆಷ್ಟು ಅಡ್ಡಿ ಆತಂಕಗಳು ಬರುತ್ತವೆ.

ಪದ್ಯ–13 (ಅನ್ವಯ) सायंतने सवनकर्मणि संप्रवृत्ते (सति) हुताशनवतीं वेदीं परितः प्रकीर्णाः संन्ध्यापयोदकपिशाः पिशिताशनानां छायाः बहुधा भयम् आदधानाः (सत्यः) चरन्ति ॥

'ಸಾಯಂಕಾಲದ ಯಜ್ಞಕರ್ಮಗಳು ಪ್ರಾರಂಭವಾಗಲಾಗಿ ಪವಿತ್ರಾಗ್ನಿಯಿಂದ ಕೂಡಿದ ಯಜ್ಞವೇದಿಯ ಸುತ್ತಲೂ ಸಾಯಂಕಾಲದ ಮೇಘಗಳನ್ನು ಹೋಲುವ ರಾಕ್ಷಸರುಗಳ ನೆರಳುಗಳು ಭಯಂಕರವಾಗಿ ಕಾಣುತ್ತಿವೆ.'

सायंतने—'तन' ಎಂಬ ತದ್ಧಿತ ಪ್ರತ್ಯಯವನ್ನು सायं, चिरं ಮುಂತಾದ ಕಾಲ ನಿರ್ದೇಶಕ ಅವ್ಯಯಗಳಿಗೆ ಸೇರಿಸಲಾಗುತ್ತದೆ.

सवनकर्मणि संप्रवृत्ते—ಯಜ್ಞ ಕರ್ಮವು ಪ್ರಾರಂಭವಾಗಲಾಗಿ (ಸತಿ ಸಪ್ತಮೀ)

हुताशनवतीं–ಅಗ್ನಿಯಿಂದ ಕೂಡಿದ हुतम् अशनं यस्य सः अथवा हुतस्य अशन

वेदी—ಯಜ್ಞವೇದಿಕೆ, ಜಗುಲಿ.

परितः—ಸುತ್ತಲೂ. परितः ಎಂಬ ಅವ್ಯಯ ಬಂದಿರುವುದರಿಂದ 'ವೇದೀಮ್' ಎಂಬ ದ್ವಿತೀಯಾ ವಿಭಕ್ತಿಯ ಪದ ಬಂದಿದೆ "अभितः परितः समयानिकषाहाप्रतियोगेऽपि"

सन्ध्यापयोदकपिशाः — ಸಂಧ್ಯಾಕಾಲದಲ್ಲಿ ಕಂಡುಬರುವ ಮೋಡಗಳಂತೆ ಕಂದು ತಿರುಗಿದ ಕೆಂಪು ಬಣ್ಣದ.

पिशिताशनानां—ಮಾಂಸಭಕ್ಷಕರ (ರಾಕ್ಷಸರ) पिशितस्य अशनाः तेषाम्। अथवा पिशितं अशनं येषां ते, तेषाम्।

ಈ ಅಂಕದ ಪ್ರಾರಂಭದಲ್ಲಿ ಯಜಮಾನಶಿಷ್ಯನು ರಾಜನ ಅನುಪಮ ಪರಾಕ್ರಮವನ್ನು ಬಣ್ಣಿಸುತ್ತಾ, 'येन प्रविष्टमात्र एवाश्रमं तत्रभवति राजनि निरुपप्लवानि नः कर्माणि संवृत्तानि' ಅಂದರೆ ಆಶ್ರಮದ ಪವಿತ್ರ ಕರ್ಮಗಳು ಆತಂಕವಿಲ್ಲದೆ ನಡೆಯುತ್ತಲಿವೆ ಎಂದು ಹೇಳುತ್ತಾನೆ. ಆದರೆ ಇದೇ ಅಂಕದ ಕೊನೆಯಲ್ಲಿ ಸಾಯಂ ಸವನಕರ್ಮಗಳು ಪ್ರಾರಂಭವಾಗುತ್ತಿದ್ದಂತೆಯೇ ಯಜ್ಞವೇದಿಯನ್ನು ಧಾಳಿಮಾಡಲು ರಾಕ್ಷಸರ ದಂಡು ಯತ್ನಿಸುತ್ತಿದೆ ಎಂದು ಹೇಳಲಾಗಿದೆ. ಇದರಿಂದ ರಾಕ್ಷಸಪೀಡೆ ಸಂಪೂರ್ಣವಾಗಿ ತೊಲಗಿಲ್ಲವೆಂದೂ ಆದುದರಿಂದಲೇ ರಾಜನು ಅಲ್ಲೇ ಇನ್ನೂ ಇರಬೇಕಾಗಿತ್ತೆಂದೂ ಸ್ಪಷ್ಟವಾಗುತ್ತದೆ.

ಮೂರನೆಯ ಅಂಕ, ಒಂದು ವಿಧದಲ್ಲಿ ಮೊದಲನೆಯ ಅಂಕದ ಪುನರಾಮರ್ಶವೇ ಆದರೆ ಇಲ್ಲಿ ಆ ಪ್ರಸಂಗಗಳು ಮುಂದುವರೆದಿವೆ. ರಂಗಸ್ಥಳದ ತುಂಬ ಈ ಅಂಕದಲ್ಲಿ ಶಕುಂತಲೆ, ದುಷ್ಯಂತ, ಅನಸೂಯೆ ಮತ್ತು ಪ್ರಿಯಂವದೆಯರೇ. ಮೊದಲನೆಯ ಅಂಕದಲ್ಲಿ ಅಂಕುರವಾಗಿ, ಎರಡನೆಯ ಅಂಕದಲ್ಲಿ ರಮ್ಯವಾಗಿ ಚಿಗುರಿ ಎಲೆ ತುಂಬಿದ ಪ್ರೇಮ ಇಲ್ಲಿ ತೀವ್ರವಾಗಿ ಬೆಳೆದು ಪುಷ್ಪಿತವಾಗಿ ಫಲಪ್ರಾಪ್ತಿಯ ಗುರಿಯವರೆಗೆ ಬೆಳೆಯುತ್ತದೆ. ಮೊದಲನೆಯ ಅಂಕದಂತೆ ಇಲ್ಲೂ ಸ್ತ್ರೀಪಾತ್ರಗಳದ್ದೇ ಸಡಗರ, ಅಲ್ಲಿನಂತೆಯೇ ಇಲ್ಲಿಯೂ ಅಂತರಂಗಕೃಷಿಯ ಪ್ರಸಾರ. ಎರಡನೆಯ ಅಂಕಕ್ಕೆ ಹೋಲಿಸಿದರೆ ಈ ಅಂಕದಲ್ಲಿ ಗಣನೀಯವಾದ ಭಾವವ್ಯತ್ಯಾಸವಿದೆ. ಎರಡನೆಯ ಅಂಕದಲ್ಲಿ ಪುರುಷ ಪಾತ್ರಗಳ ಗಡಿಬಿಡಿ, ವಿವಿಧ ಬಹಿರಂಗ ವ್ಯಾಪಾರಗಳಾದರೆ ಇಲ್ಲಿ ಸ್ತ್ರೀಪಾತ್ರಗಳ ಸಡಗರ ಮತ್ತು ಅಂತರಂಗದ ವ್ಯಾಪಾರ. ಒಟ್ಟಿನಲ್ಲಿ ಪ್ರಣಯಿಗಳ ಪ್ರೇಮದ ವಿಶದೀಕರಣ ಅತ್ಯಂತ ಕೌಶಲದಿಂದ ನವುರಾಗಿ ಚಿತ್ರಿತವಾಗಿದೆ.

# ನಾಲ್ಕನೆಯ ಅಂಕ

[ವಿಷ್ಕಂಭದಲ್ಲಿ ಕಂಡುಬರುವಂತೆ ಶಕುಂತಲೆಯ ಸಖಿಯರಾದ ಅನಸೂಯೆ ಪ್ರಿಯಂವದೆಯರು ಅವಳ ಭವಿಷ್ಯದ ಬಗ್ಗೆ ಚಿಂತಾಕ್ರಾಂತರಾಗಿದ್ದಾರೆ. ಇಂತಹ ಆತಂಕದ ಸನ್ನಿವೇಶದಲ್ಲಿ ಸುಲಭಕೋಪನಾದ ದುರ್ವಾಸಮುನಿಯು ತಾನು ಆಶ್ರಮದ ಸಮೀಪಕ್ಕೆ ಬಂದಿರುವುದಾಗಿ ಶ್ರುತಪಡಿಸುತ್ತಾನೆ. ಆಗ ಅಲ್ಲೇ ಇದ್ದ ಶಕುಂತಲೆಯು ಅನ್ಯಮನಸ್ಕಳಾಗಿದ್ದುದರಿಂದ ಮುನಿಯ ಆಗಮನ ಅವಳ ಗಮನಕ್ಕೆ ಬರುವುದೇ ಇಲ್ಲ. ಅದರ ಪರಿಣಾಮವಾಗಿ ಮುನಿಶಾಪ; ಯಾವನನ್ನು ಚಿಂತಿಸುತ್ತಾ, ಅವಳು ತಪೋಧನನಾದ ಮುನಿ ಬಂದುದನ್ನು ಲೆಕ್ಕಿಸುವುದಿಲ್ಲವೋ, ಅವನು, ಜ್ಞಾಪಿಸಿಕೊಟ್ಟರೂ ಅವಳನ್ನು ಸ್ಮರಿಸಿಕೊಳ್ಳ ನೆಂಬುದು ಶಾಪದ ವಿಷಯ. ಮುಂದೆ ಪ್ರಿಯಂವದೆ ತನ್ನ ಪ್ರಿಯಸಖಿಯ ಪರವಾಗಿ ಎಷ್ಟು ಯಾಚಿಸಿದರೂ ಶಾಪವನ್ನು ಹಿಂತೆಗೆದುಕೊಳ್ಳಲು ಒಪ್ಪದ ಮುನಿ, ಕಡೆಯಲ್ಲಿ ಸ್ವಲ್ಪ ಕನಿಕರಿಸಿ ಅಭಿಜ್ಞಾನಾಭರಣವನ್ನು ನೋಡಿದಾಗ ಮಾತ್ರ ಶಾಪ ಪರಿಹಾರವಾಗುವುದೆಂದು ಭರವಸೆ ಕೊಡುತ್ತಾನೆ. ಆಶ್ರಮಕ್ಕೆ ಬಂದಿದ್ದ ದುಷ್ಯಂತ ಹಸ್ತಿನಾಪುರಕ್ಕೆ ಹೊರಡುವ ಮುನ್ನ ಸ್ವನಾಮಾಂಕಿತ ವಾದ ಉಂಗುರವೊಂದನ್ನು ಸ್ಮರಣೀಯವಾಗಿ ಶಕುಂತಲೆಗೆ ಕೊಟ್ಟಿದ್ದನ್ನು ಜ್ಞಾಪಿಸಿಕೊಂಡ ಸಖಿಯರು ಕಷ್ಟದಿಂದ ಪಾರಾಗುವ ಅವಕಾಶವನ್ನು ಮನ ಗಂಡು ಸಮಾಧಾನಪಟ್ಟುಕೊಳ್ಳುತ್ತಾರೆ. ಆದರೆ ಇತ್ತೀಚಿಗೆ ನಡೆದ ಘಟನೆ ಗಳನ್ನು ಶಕುಂತಲೆಗೆ ತಿಳಿಸುವುದಿಲ್ಲ.]

ಸೋಮತೀರ್ಥದಿಂದ ಹಿಂತಿರುಗಿದ ಕಾಶ್ಯಪ ದುಷ್ಯಂತನೊಡನೆ ಶಕುಂತಲೆಯ ಸಂಬಂಧವನ್ನು ಅಶರೀರವಾಣಿಯ ಮೂಲಕ ತಿಳಿದು, ಅವಳನ್ನು ಪತಿಗೃಹಕ್ಕೆ ಕಳಿಸಿಕೊಡುವ ಇಚ್ಛೆಯುಳ್ಳವನಾಗಿರುತ್ತಾನೆ. ಆದರಂತೆ ಅವಳ ನಿರ್ಗಮನಕ್ಕೆ ಸಿದ್ಧತೆಗಳು ನಡೆಯುತ್ತವೆ. ಆಶ್ರಮವಾಸಿಗಳೂ, ಅಲ್ಲಿನ ತರುಲತೆಗಳೂ ಮೃಗ ಪಕ್ಷಿಗಳೂ ಅವಳನ್ನು ಬೀಳ್ಕೊಡುವುದರಲ್ಲಿ ಭಾಗವಹಿಸಿ ತಮ್ಮ ತಮ್ಮ ಶೋಕವನ್ನು ವ್ಯಕ್ತಪಡಿಸುವ ಒಂದು ಹೃದಯಸ್ಪರ್ಶಿ ಸನ್ನಿವೇಶ ಒದಗುತ್ತದೆ; ಆ ಅಗಾಧ ಶೋಕದ ಮಧ್ಯೆ ಶಕುಂತಲೆಗೆ ಶುಭ ಹಾಗೂ ಸುಖಪ್ರಯಾಣದ ಕೋರಿಕೆ.

ಅತ್ಯಂತ ಪ್ರೀತಿಪಾತ್ರಳಾದ ಪುತ್ರಿಯಿಂದ ಅಗಲುವಿಕೆಯುಂಟಾಗುವುದನ್ನು ನೆನೆಸಿಕೊಳ್ಳುತ್ತಿರುವ ಕಾಶ್ಯಪನ ಹೃದಯ ಶೋಕನಿರ್ಭರವಾಗಿದ್ದು, ಆ ಶೋಕ ಉದಾತ್ತ ರೀತಿಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಶಕುಂತಲೆಯನ್ನು ಆಶೀರ್ವದಿಸಿ, ಶಿಷ್ಯರಾದ ಶಾರ್ಙ್ಗರವ ಶಾರದ್ವತರ ಮೂಲಕ ಆ ಮುನಿ ಶಕುಂತಲೆಯ ಭವಿಷ್ಯತ್ಸುಖ

ವನ್ನು ಕುರಿತು ಹಾಗೂ ಸತ್ಸಂಕಲ್ಪದ ಸಂದೇಶವೊಂದನ್ನು ದುಷ್ಯಂತನಿಗೆ ಕಳಿಸುತ್ತಾನೆ. ಶಿಷ್ಯರೂ ಗೌತಮಿಯೂ ಶಕುಂತಲೆಯರೂ ಹಸ್ತಿನಾಪುರಕ್ಕೆ ಹೊರಡುತ್ತಾರೆ.

[ಸ್ಥಳ—ಇಲ್ಲಿನ ದೃಶ್ಯಗಳು ಕಾಣಬರುವುದು ತಪೋವನದಲ್ಲಿ ಮತ್ತು ಕಾಶ್ಯಪನ ಆಶ್ರಮ.

ಕಾಲ—ಇಲ್ಲಿ ವಿಷ್ಕಂಭದ ವೃತ್ತಾಂತಗಳು ನಡೆಯುವುದು ಆಷಾಢದ ಮೊದಲ ದಿನದಲ್ಲಿ ಎಂದು ಊಹಿಸಲು ಸಾಧ್ಯ. ಅಂಕ ಪ್ರಾರಂಭವಾಗುವುದು ಮುಂಜಾನೆಯಲ್ಲಿ; ಅದರ ಸಂಗತಿಗಳು ದಿನಪೂರ್ತಿವಾಗಿವೆ.]

ನಾಟ್ಯನ್ತ್ಯೌ ನಟಿಸುತ್ತ. गान्धर्वेण विधिना ಗಾಂಧರ್ವ ವಿವಾಹದಿಂದ; ಇದು ಮನು ಹೇಳಿರುವ ಎಂಟು ವಿವಾಹ ವಿಧಗಳಲ್ಲೊಂದು ;—

ब्राह्मो दैवस्तथैवार्षः प्राजापत्यस्तथासुरः ।
गान्धर्वो राक्षसश्चैव पैशाचश्चाष्टमोऽधमः ॥

ಗಾಂಧರ್ವವಿವಾಹದಲ್ಲಿ ಪರಸ್ಪರ ಪ್ರಣಯ ಮುಖ್ಯವಾದ ಅಂಶ. अनु.... गामिनीरूपस्य योग्यः अनुरूपः, अनुरूपश्चासौ भर्ता च, तं गच्छतीति इष्टि ಯೂಗ. आकृतिविशेषाः—आकृतिः विशेषः येषां ते ಗಂಭೀರವಾದ ರೂಪವುಳ್ಳವರು. यथाहं पश्यामि ನನಗೆ ತಿಳಿದ ಮಟ್ಟಿಗೆ. गुणवते—गुणवत् ಎಂಬುದರ ಚತುರ್ಥೀ ಏಕ, ವ. गुणाः सन्ति अस्य इति गुणवत्.

सौभाग्यदेवता—सुभगस्य सुभगायाः वा भावः सौभाग्यम्. नेपथ्ये ತೆರೆಯ ಹಿಂದೆ; ಕ್ರಮೇಣ ಸ್ಪಷ್ಟಪಡುವಂತೆ ಇದು ದುರ್ವಾಸಮುನಿಯ ಮಾತು.

निवेदितं—ಪಾ. III. 3. 114, नपुंसके भावे क्तः ಎಂಬುದರಿಂದ ನಿಷ್ಪನ್ನವಾಗಿದೆ; निवेदनं ಎಂಬ ಪದಕ್ಕೆ ಸಮ. उटजसंनिहिता—उटजे संनिहिता ಆಶ್ರಮದಲ್ಲಿ ಇರುತ್ತಾಳೆ. हृदयेन असंनिहिता ಮನಸ್ಸು ಮಾತ್ರ ಅಲ್ಲಿಲ್ಲ.

ಪದ್ಯ-1 (ಅನ್ವಯ) अनन्यमनसा यं विचिन्तयन्ती तपोधनं मां उपस्थितं न वेत्सि, सः बोधितः अपि सन्, प्रमत्तः प्रथमं कृतां कथां इव, त्वां न स्मरिष्यति ॥

" ಅನನ್ಯಮನಸ್ಕಳಾಗಿ ಯಾವ ಪುರುಷನನ್ನು ಕುರಿತು ಚಿಂತಿಸುತ್ತಾ ಇಲ್ಲಿಗೆ ಬಂದಿರುವ ತಪೋಧನನಾದ ನನ್ನನ್ನು ಗಮನಿಸದೆ ಇದ್ದೀಯೋ, ಅವನು (ಆ ಪುರುಷ) ಪ್ರಮತ್ತನೊಬ್ಬನು ತಾನೇ ಆಡಿದ ಮಾತುಗಳ ವಿಚಾರದಲ್ಲಿ ನಡೆದುಕೊಳ್ಳುವಂತೆ, ಜ್ಞಾಪಕಕೊಟ್ಟರೂ ನಿನ್ನನ್ನು ಸ್ಮರಿಸನು."

ಈ ಶ್ಲೋಕದಲ್ಲಿ ದುರ್ವಾಸನ ಶಾಪವನ್ನು ಕಾಣಬಹುದು; ಅದು ಮಹಾಭಾರತದ ಶಕುಂತಲಾ ಪ್ರಸಂಗದಲ್ಲಿ ಕಂಡುಬರುವುದಿಲ್ಲ. ಅಂದರೆ ಕೇವಲ ಕಾಳಿದಾಸ ಕಲ್ಪಿತ. ಶಾಪಪ್ರಸಂಗ ನಾಟಕದಲ್ಲಿ ಬಹು ಮುಖ್ಯವಾಗಿದೆ. ಅದರ ಮುಖ್ಯತೆಗೆ ಕಾರಣಗಳೆಂದರೆ: (1) ದುಷ್ಯಂತನ ಪಾತ್ರಕ್ಕೆ ಅದರಿಂದ ಗಾಂಭೀರ್ಯ ದೊರಕಿದೆ.

(2) ನಾಟಕ ಮುಂದುವರಿಯುವುದು ಅದರ ಸಹಾಯದಿಂದ (3) ಅದು ಹೃದಯಂಗಮವಾದ ಒಂದು ನಾಟಕೀಯ ಸನ್ನಿವೇಶವನ್ನುಂಟುಮಾಡಿರುವುದಲ್ಲದೆ, ನಾಟಕೀಯ ಸ್ವಾರಸ್ಯವನ್ನೂ ತಂದುಕೊಟ್ಟಿದೆ. (4) ದುಷ್ಯಂತ ಶಕುಂತಲೆಯರನ್ನು ಶೋಕಮಗ್ನರನ್ನಾಗಿ ಮಾಡಿ, ಅವರು ನಿಃಸ್ವಾರ್ಥತೆ ತ್ಯಾಗಗಳ ಮೂಲಕ ಶುದ್ಧ ಪ್ರೇಮಕ್ಕೆ ಅರ್ಹರಾಗುವಂತೆ ಅದು ಮಾಡುತ್ತದೆ. ಅತಿಮಾನುಷಕ, ಮಾನಸಿಕ, ಆಧ್ಯಾತ್ಮಿಕ ದೃಷ್ಟಿಗಳಿಂದ ಶಾಪದ ಅರ್ಥವನ್ನು ಚರ್ಚಿಸಿ ವಿದ್ವಾಂಸರು ನಾನಾ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

अनन्यमानसा—न विद्यते अन्यस्मिन् मानसं यस्याः सा. वेत्सि 2. ಲಟ್ ಮಧ್ಯಮಪುರು. ಏಕ. वेत्ति वित्तः विदन्ति, वेत्सि वित्थः वित्थ, वेद्मि विद्वः विद्मः। न खलु यस्मिन कस्मिन्नपि ಅವರಿವರ ವಿಷಯದಲ್ಲಲ್ಲ. शून्यहृदया—ಶೂನ್ಯಮನಸ್ಕಳಾಗಿ शून्यहृदयं यस्याः दुर्वासाः दुःसाध्यः वासः यस्य सः—ಇರಿಸಿಕೊಳ್ಳಲು ಕಷ್ಟನಾದ, ವಕ್ರವಸ್ತ್ರ ಧಾರಿಯಾದ. सुलभकोपः सुलभः कोपः यस्य सः—ಬೇಗ ಕೋಪಿಸಿಕೊಳ್ಳುವ, ಕೋಪಶೀಲನಾದ. हुतवहात् अन्य: हुतं वहति इति हुतवहः ಅಗ್ನಿ; अन्य ಎಂಬುವದರೊಡನೆ ಬರುವ ನಾಮಪದ ಅಥವಾ ಸರ್ವನಾಮ ಪಂಚಮೀ ವಿಭಕ್ತಿಯಲ್ಲಿರುತ್ತದೆ — ಪಾ. II.3.29. अन्यारादितरर्तेदिक्छब्दाञ्चूत्तरपदाजाहियुक्ते.

प्रभ्रष्टम्—ಕೆಳಗೆ ಬಿದ್ದ. ಎಡವಟಕ್ಕದ್ದು ಮತ್ತು ವಸ್ತು ಕೆಳಗೆ ಬೀಳುವುದು ಅಶುಭ ಸೂಚನೆ ಎಂದು ನಂಬಿಕೆ. प्रकृतिवक्रः—प्रकृत्या वक्रः, ಸ್ವಭಾವತಃ ವಕ್ರ. सानुक्रोशः—अनुक्रोशेन सह विद्यते इति ದಯೆಯುಳ್ಳವನು. तस्मिन् बहु एतदपि ದುರ್ವಾಸಮುನಿಯ ವಿಚಾರದಲ್ಲಿ ಇಷ್ಟುಕೂಡ ನಿರೀಕ್ಷಣೆಗೆ ಮೀರಿದ್ದು. मर्षितव्यः ಕ್ಷಮಿಸಲ್ಪಡಬೇಕು; √मृष्–तव्य ಪ್ರತ್ಯಯ ಸೇರಿದೆ. अभि.... दर्शनेन—अभिज्ञानं च तत् आभरणं च, तस्य दर्शनं तेन—ಗುರುತಿನ ಆಭರಣದ ದರ್ಶನದಿಂದ. अन्तर्हितः ಅದೃಶ್ಯವಾಗಿ. अस्ति—ಇದು ವಾಕ್ಯದ ಪ್ರಾರಂಭದಲ್ಲಿ ಬಹುಮಟ್ಟಿಗೆ ಅವ್ಯಯದಂತೆ ಪ್ರಯೋಗಿಸಲ್ಪಡುತ್ತದೆ. स्वनाम.... अङ्गुलीयकम् — स्वस्य नामधेयेन अङ्कितं अङ्गुलीयकम्. ಈ ಉಂಗುರದ ವೃತ್ತಾಂತ ಮಹಾಭಾರತದಲ್ಲಿನ ಶಕುಂತಲಾ ಪ್ರಸಂಗದಲ್ಲಿ ಕಂಡುಬರುವುದಿಲ್ಲ. ಅದು ಕಾಳಿದಾಸ ಕಲ್ಪಿಸಿಕೊಂಡದ್ದು. ಇದರ ಉದ್ದೇಶ :—(1) ನಾಟಕೀಯತೆಯನ್ನು ಉತ್ತಮಪಡಿಸುವುದು (2) ನಾಟಕ ದುರಂತವಾಗದಂತೆ ಮಾಡುವುದು ಮತ್ತು (3) ನಾಟಕವನ್ನು ಹೆಚ್ಚು ಹೆಚ್ಚು ಚಮತ್ಕಾರವಾಗಿಸುವಿಕೆ. ಆದ್ದರಿಂದ ಉಂಗುರ ವೃತ್ತಾಂತ ನಾಟಕದಲ್ಲಿ ಬಹುಮುಖ್ಯವಾಗಿದೆ. पिनद्धम् ಕಟ್ಟಿದ. अपि + √नह् + त—ಆದರೆ ಪಾಣಿನಿಸೂತ್ರ II.4.82.ರ ಸಿದ್ಧಾಂತ ಕೌಮುದೀ ವಿವರಣೆಯ ಪ್ರಕಾರ 'अ' ಕಾರಕ್ಕೆ ಲೋಪ ಬಂದು पिनद्धम् ಎಂದಾಗಿದೆ.

स्वाधीनोपाया—स्वस्मिन् अधि स्वाधीनः, स्वाधीनः उपायः यस्याः सा— ಉಪಾಯುವನ್ನು ಬಲ್ಲವಳಾಗಿ. द्वयोरेव... तिष्ठतु—ಹೀಗೆ ಸಖಿಯರು ವಿಚಾರ ವನ್ನು ಗೋಪ್ಯವಾಗಿಡತಕ್ಕದ್ದು ನಾಟಕದಲ್ಲಿ ವಸ್ತುರಚನೆ ಇತ್ಯಾದಿಗಳ ದೃಷ್ಟಿ ಯಿಂದ ಅತಿ ಮುಖ್ಯ.

ಇಲ್ಲಿ ವಿಷ್ಕಂಭ ಮುಗಿಯುತ್ತದೆ. ಅದು ಕೆಲವು ಮುಖ್ಯವಾದ ಅಂಶಗಳನ್ನೊಳ ಗೊಂಡು ನಾಲ್ಕನೆಯ ಅಂಕಕ್ಕೆ ಸೂಕ್ತ ಪೀಠಿಕೆಯಾಗಿದೆ. ಅವು (1) ಗಾಂಧರ್ವ ವಿಧಿಯಂತೆ ದುಷ್ಯಂತ ಶಕುಂತಲೆಯರ ವಿವಾಹ ನಡೆದಿದೆಯೆಂಬ ವಿಚಾರ (2) ಶಕುಂತಲೆಗೂ ಅವಳ ಸಖಿಯರಿಗೂ ದುಷ್ಯಂತ ಕೊಟ್ಟ ಮಾತಿನಂತೆ ಅವಳನ್ನು ಹಸ್ತಿನಾಪುರಕ್ಕೆ ಕಳಿಸುವ ಬಗ್ಗೆ ಕಳವಳ, ಮತ್ತು ದುಷ್ಯಂತನೊಡನೆ ಶಕುಂತಲೆ ಸಂಬಂಧ ಬೆಳೆಸಿರುವುದನ್ನು ತಿಳಿದ ಕಾಶ್ಯಪಮುನಿಯ ಪ್ರತಿಕ್ರಿಯೆ. (3) ದುರ್ವಾಸನ ಶಾಪ (4) ದುಷ್ಯಂತ ಸ್ಮರಣೀಯವಾಗಿ ಶಕುಂತಲೆಗೆ ಉಂಗುರವೊಂದನ್ನು ಕೊಟ್ಟು ಹೋಗಿರುವ ವಿಚಾರ. (5) ಮುಂದೆ ಸಂಭವಿಸಬಹುದಾದ ವಿಪತ್ತಿನಿಂದ ಪಾರಾಗುವ ಆಸೆಯ ಸೂಚನೆ.

वेलोपलक्षणार्थम् ಕಾಲವನ್ನು ತಿಳಿಯುವುದಕ್ಕೋಸ್ಕರ, वेलायाः उपलक्षणं, तस्मै।

ಪದ್ಯ—2 (ಅನ್ವಯ) एकतः ओषधीनां पतिः अस्तशिखरं याति । एकतः आविष्कृतारुणपुरःसरः अर्कः । तेजोद्वयस्य युगपद् व्यसनोदयाभ्यां लोकः आत्मदशान्तरेषु नियम्यते इव ॥

"ಒಂದು ಕಡೆ ಗಿಡಮೂಲಿಕೆಗಳ ಪ್ರಭುವಾದ ಚಂದ್ರನು ಮುಳುಗುತ್ತಿದ್ದಾನೆ. ಮತ್ತೊಂದು ಕಡೆ, ಅರುಣನನ್ನು ಮುಂದೆ ಮಾಡಿಕೊಂಡು (ಉದಯಿಸುವ) ಸೂರ್ಯ. ಹೀಗೆ ಎರಡು ಜ್ಯೋತಿಗಳ ಏಕಕಾಲದ ಅಸ್ತೋದಯಗಳಿಂದ ಲೋಕ ತನ್ನ ವಿವಿಧ ದಶೆಗಳಲ್ಲಿ ನಿಯಮಿತಗೊಳ್ಳುವಂತೆ ತೋರುತ್ತದೆ."

ओषधीनां पतिः ಗಿಡಮೂಲಿಕೆಗಳ ಒಡೆಯ, ओषः पाकः दीप्तिर्वा धीयते अस्यां इति ओषधिः, ಸೂರ್ಯನ ಉದಯ ಮತ್ತು ಚಂದ್ರನ ಅಸ್ತ ಇವು ಜೀವನದ ಏರಿಳಿತಗಳ ವಿಚಾರದಲ್ಲಿ ಪಾಠಪ್ರದವೆಂಬಂತಿದೆ. ಇಲ್ಲಿ ನಿದರ್ಶನಾಲಂಕಾರವಿದೆ.

ಪದ್ಯ—3 (ಅನ್ವಯ) शशिनि अन्तर्हिते सा एव कुमुद्वती संस्मरणीयशोभा मे दृष्टिं न नन्दयति। नूनं अबलाजनस्य इष्टप्रवासजनितानि दुःखानि अतिमात्रसुदुःसहानि ॥

"ಚಂದ್ರ ಮರೆಯಾಗಲಾಗಿ, ಕೇವಲ ಸ್ಮರಣೆಗೆ ವಿಷಯವಾದ ಅಂದವುಳ್ಳ ಕುಮುದಿನಿಯು ನನ್ನ ಕಣ್ಣಿಗೆ ಸಂತೋಷವುಂಟುಮಾಡುವುದಿಲ್ಲ. ಇಷ್ಟಜನರ ದೂರ ಪ್ರವಾಸದಿಂದ ಅಬಲೆಯರಿಗುಂಟಾಗುವ ದುಃಖ ಸಹಿಸಲಶಕ್ಯವೇ ಸರಿ".

ದುಷ್ಯಂತ ದೂರವಿರುವ ಈ ಸ್ಥಿತಿಯಲ್ಲಿ ಶಕುಂತಲೆಯ ಪಾಡು ಶೋಚನೀಯ ವೆಂಬುದನ್ನು ಈ ಶ್ಲೋಕ ಸೂಚಿಸುತ್ತದೆ.

ಕಡೆಯ ಎರಡು ಪಂಕ್ತಿಗಳು ಅರ್ಥಾಂತರನ್ಯಾಸವೆಂಬ ಅಲಂಕಾರವನ್ನೊಳಗೊಂಡಿವೆ.

इष्टप्रवासजनितानि—इष्टः प्रियः तस्य प्रवासो देशान्तरस्थितिः तेन जनितानि दुःखानि ಇಷ್ಟಮಿತ್ರರು ದೂರದೇಶಗಳಿಗೆ ಹೋಗುವುದರಿಂದುಂಟಾಗುವ ದುಃಖ. अपटीक्षेपेण ತೆರೆಯನ್ನು ನೂಕಿ. अपटी-नेपथ्य ವನ್ನು ಮರೆಮಾಡುವ ತೆರೆ. अनार्यम्—न आर्यम् ಘನತೆಗೆಟ್ಟದ್ದನ್ನು. हस्तपादं—हस्तौ च पादौ च—ಇದೊಂದು ಸಮಾಹಾರ ದ್ವಂದ್ವ (ಪಾ. II.4.2. द्वन्द्वश्च प्राणितूर्यसेनाङ्गानाम्)

पदं कारिता — ಸಂಪರ್ಕವಿಟ್ಟುಕೊಳ್ಳುವಂತೆ ಮಾಡಲ್ಪಟ್ಟ, पदं कृ ಎಂಬುದರ ಪ್ರೇರಣಾರ್ಥಕ ರೂಪ, आपन्नसत्त्वा ಗರ್ಭಿಣಿಯಾಗಿರುವ. प्रस्थानकौतुकम् ಹೊರಡುವ ಸಮಯದ ಶುಭಸಮಾರಂಭ प्रस्थाने गमनसमये कौतुकं, पारंपर्यागतमङ्गलम् ।

सुखशयनपृच्छिका—सुखशयनं पृच्छतीति ಸುಖನಿದ್ರೆಯ ವಿಚಾರವನ್ನು ಕೇಳತಕ್ಕವಳು. सुशिष्यपरिदत्ता — सुशिष्ये परिदत्ता ಯೋಗ್ಯಶಿಷ್ಯನಿಗೆ ದಾನಮಾಡಿದ. अग्निशरणम् ಅಗ್ನಿಯನ್ನಿರಿಸುವ ಒಂದು ಶಾಲೆ, अग्न्यगार, होमशाला ಎಂಬ ಹೆಸರುಗಳೂ ಉಂಟು.

ಪದ್ಯ—4 (ಅನ್ವಯ) ब्रह्मन्, तनयां भुवः भूतये दुष्यन्तेन आहितं तेजः दधानां अग्निगर्भां शमीं इव अवेहि ॥

"ಮುನಿಯೇ, ನಿನ್ನ ಪುತ್ರಿಯು ಭೂಮಿಯ ಅಭ್ಯುದಯಕ್ಕೋಸ್ಕರ (ಲೋಕಕಲ್ಯಾಣಕ್ಕೋಸ್ಕರ) ದುಷ್ಯಂತನಿಂದ ಇರಿಸಲ್ಪಟ್ಟ ತೇಜಸ್ಸನ್ನು ಧರಿಸಿ, ತನ್ನೊಳಗೆ ಅಗ್ನಿಯನ್ನಡಗಿಸಿಕೊಂಡಿರುವ ಶಮೀವೃಕ್ಷದಂತಿದ್ದಾಳೆಂದು ತಿಳಿ."

अग्निगर्भां शमीम् इव—अग्निः गर्भे यस्या. सा, तां ಬನ್ನಿಮರ. ಇದರೊಳಗೆ ಅಗ್ನಿ ಇರುತ್ತದೆಂದು ಪ್ರತೀತಿ.

उत्कण्ठासाधारणं परितोषं — उत्कण्ठया साधारणः परितोषः, तं ಆತಂಕಮಿಶ್ರಿತ ಸಂತೋಷ. तपस्विनी ಬಡಪಾಯಿ ಹೆಂಗಸು. नालिकेरसमुद्गके ತೆಂಗಿನ ಚಿಪ್ಪಿನ ಪೆಟ್ಟಿಗೆ कालन्तरक्षमा—कालस्य अन्तर क्षमते असौ ಕಾಲಯಾಪನೆಯನ್ನು ಸಹಿಸುವ. समालम्भनानि. ಅಲಂಕಾರ ಸಾಮಗ್ರಿಗಳು. शार्ङ्गरवमिश्राः ಮಾನ್ಯಶಾರ್ಙ್ಗರವ, मिश्र ಇದು ಗೌರವ ಸೂಚಕ. स्वस्तिवाचनिकाभिः — स्वस्तिसम्बन्धि वाचनं स्वस्तिवाचनं अस्ति आसां इति—स्वस्तिवाचनिकाः ताभिः—(ಪಾ. V.2.115. अत इनिठनौ) देवी ಪಟ್ಟದರಾಣಿ; ರಾಜನ ಇತರ ಪತ್ನಿಯರುಗಳಿಗಿಂತ ಭಿನ್ನಳಾದವಳು. वीरप्रसविनी—वीरान् प्रसूते इति ವೀರರಿಗೆ ಜನ್ಮಕೊಡತಕ್ಕವಳು. बहुमता ಬಹು ಸಂಭಾವಿತಳು. आभरणोचितं....विप्रकार्यते ಆಶ್ರಮದಲ್ಲಿ ಸುಲಭವಾಗಿ ದೊರಕುವ

ಅಲಂಕಾರದ ಸಾಮಗ್ರಿಗಳಿಂದ ಆಭರಣೋಚಿತ ರೂಪಿಗೆ ಭಂಗ. वनस्पतिभ्यः ಗಿಡಮರಗಳಿಂದ वन ಮತ್ತು पति ಇವೆರಡರ ಮಧ್ಯೆ स्, पारस्करप्रभृतीनि संज्ञायाम् (ಪಾ. VI. 1.157) ಎಂಬ ಸೂತ್ರದಿಂದ ಬರುತ್ತದೆ.

ಪದ್ಯ—5 (ಅನ್ವಯ) केनचित् तरुणा माङ्गल्यं इन्दुपाण्डु क्षौमं आविष्कृतम् । केनचित् चरणोपभोगसुलभः लाक्षारसः निष्ठ्यूतः । अन्येभ्यः आपर्वभागोत्थितैः किसलयोद्भेदप्रतिद्वन्द्विभिः वनदेवताकरतलैः आभरणानि नः दत्तानि ॥

"ಒಂದು ತರು, ಚಂದ್ರನಂತೆ ಬೆಳ್ಳಗಿರುವ ಮಂಗಳವಸ್ತ್ರವನ್ನು ಹೊರಪಡಿಸಿತು; ಮತ್ತೊಂದು, ಕಾಲುಗಳಿಗೆ ಬಣ್ಣಹಾಕಲು ಸಿದ್ಧವಾದ ಅರಗಿನ ರಸವನ್ನು ಸ್ರವಿಸಿತು; ಇನ್ನೂ ಕೆಲವು ತಮ್ಮ ಚಿಗುರುಗಳೊಡನೆ ಸ್ಪರ್ಧಿಸುತ್ತಿರುವ ಮುಂಡೋಳಿನವರೆಗೂ ನೀಡಿದ ವನದೇವತಾ ಹಸ್ತಗಳ ಮೂಲಕ ಆಭರಣಗಳನ್ನು ಕೊಟ್ಟವು."

ಕವಿಕಂಠಹಾರದ ಪ್ರಕಾರ ಆಭರಣಗಳು ನಾಲ್ಕು ವಿಧ : (1) ಆವೇಧ್ಯ–ಕರ್ಣ ಕುಂಡಲ ಮುಂತಾದವು (2) ಬಂಧನೀಯ–ಹೂವು ಇತ್ಯಾದಿಗಳು. (3) ಕ್ಷೇಪ್ಯ ಅಥವಾ ಪ್ರಕ್ಷೇಪ್ಯ–ಕಾಲ್ಬಳೆ ಮೊದಲಾದವು (4) ಆರೋಪ್ಯ–ಸರಾದಿಗಳು.

माङ्गल्यं—मङ्गले साधु ಸಮಾರಂಭಕ್ಕೆ ತಕ್ಕ. आपर्वभागोत्थितैः ಮುಂಡೋಳಿನ ವರೆಗೂ ಎತ್ತಿದ, पर्वणा भागाः, पर्वभागान् मर्यादीकृत्य इति आपर्वभागम्, आपर्वभागम् उत्थितानि तैः, ಗಿಡಮರಗಳು ಶಕುಂತಲೆಗೋಸ್ಕರ ಕೊಟ್ಟ ಅಲಂಕಾರ ಸಾಮಗ್ರಿಗಳು ಇಲ್ಲಿ ವರ್ಣಿತವಾಗಿವೆ; ಇದೊಂದು ಅದ್ಭುತ ಘಟನೆ.

अभ्युपपत्त्या ಅನುಗ್ರಹದಿಂದ, अनु……भूषणः ಆಭರಣಗಳನ್ನು ಬಳಸದ. चित्रकर्मपरिचयेन ಚಿತ್ರಕಲೆಯ ಅಭ್ಯಾಸದಿಂದ.

ಪದ್ಯ—6 (ಅನ್ವಯ) शकुन्तला अद्य यास्यति इति हृदयं उत्कण्ठया संस्पृष्टम् । कण्ठः स्तम्भितबाष्पवृत्तिकलुषः, दर्शनं चिन्ताजडम् । अहो ! अरण्यौकसः मम तावत् स्नेहात् ईदृशं वैक्लव्यं, गृहिणः नवैः तनयाविश्लेष-दुःखैः कथं नु पीड्यन्ते ॥

"ಇಂದು ಶಕುಂತಲೆ ನಿರ್ಗಮಿಸುವಳೆಂದು ಹೃದಯವು ಚಿಂತೆಯಿಂದ ತುಂಬಿದೆ; ಕಣ್ಣೀರಿನ ಧಾರೆಯು ತಡೆಯಿಂದ ಕಂಠ ವಿಕೃತವಾಗಿದೆ ; ಕೊರಗಿನಿಂದ ದೃಷ್ಟಿ ಮಂದವಾಗಿದೆ. ಕಾನನವಾಸಿಯಾದ ನನಗೂ ಸ್ನೇಹದ ಕಾರಣದಿಂದ ಇಂತಹ ಕ್ಲೇಶವುಂಟಾಗಿರುವಲ್ಲಿ ಪುತ್ರಿಯರ ಅಗಲುವಿಕೆಯ ನವಶೋಕದಿಂದ ಗೃಹಸ್ಥರಿಗೆ ಇನ್ನೆಷ್ಟು ಪೀಡೆ ಇದ್ದೀತು ?

ಈ ಶ್ಲೋಕದಲ್ಲಿ ಕರುಣರಸ ಅತಿ ಪರಿಣಾಮಕಾರಿಯಾಗಿಯೂ ಗಂಭೀರವಾಗಿಯೂ ಪ್ರತಿಪಾದಿತವಾಗಿರುವುದನ್ನು ಗಮನಿಸಬಹುದು. ಶಾಕುಂತಲ ನಾಟಕದ ನಾಲ್ಕನೆಯ ಅಂಕದಲ್ಲಿ ಸಾಮಾನ್ಯವಾಗಿ ಪ್ರಸಿದ್ಧವೆನಿಸಿಕೊಂಡಿರುವ ನಾಲ್ಕು ಶ್ಲೋಕ

ಗಳಲ್ಲಿ ಅದು ಮೊದಲನೆಯದು, ಉಳಿದ ಮೂರು ಶ್ಲೋಕಗಳು अस्मान्साधु, पातुं न प्रथमं, शुश्रूषस्व ಎಂದು ಮುಂತಾಗಿ ಪ್ರಾರಂಭವಾಗತಕ್ಕವು.

ಮೇಲ್ಕಂಡಂತೆ ನಾಲ್ಕನೆಯ ಅಂಕವನ್ನೂ, ಅದರ ನಾಲ್ಕು ಶ್ಲೋಕಗಳನ್ನೂ ಪ್ರಶಂಸಿಸುವ ಒಂದು ಸಾಂಪ್ರದಾಯಿಕ ಶ್ಲೋಕ ಇದು—काव्येषु नाटकं रम्यं तत्र रम्या शकुन्तला। तत्रापि च चतुर्थोऽङ्कस्तत्र श्लोकचतुष्टयम् ॥

अरण्यौकसः–अरण्यौकस् ಎಂಬುದಕ್ಕೆ ಷ. ಏಕ; मम ಎಂಬ ಪದದೊಡನೆ ಹೊಂದಿಕೊಂಡಿದೆ.

तनयाविश्लेषदुःखैः — तनयानां विश्लेषाः तेषां दुःखानि तैः। आचारम् ಸಾಮಾನ್ಯ ನಡವಳಿಕೆ.

ಪದ್ಯ—7 (ಅನ್ವಯ) शर्मिष्ठा ययातेः इव, भर्तुः बहुमता भव। त्वम् अपि सा इव पुरुं सम्राजं सुतम् अवाप्नुहि ॥

"ಶರ್ಮಿಷ್ಠೆಯು ಯಯಾತಿಯಿಂದ ಹೇಗೋ ಹಾಗೆ, ನೀನು ಪತಿಯಿಂದ ಗೌರವಿಸಲ್ಪಡುವವಳಾಗು. ಅವಳು ಪುರುವನ್ನು ಪಡೆದಂತೆ ನೀನೂ ಚಕ್ರವರ್ತಿಯಾಗುವ ಪುತ್ರನನ್ನು ಪಡೆಯುತ್ತೀಯೆ."

ಶರ್ಮಿಷ್ಠೆ ವೃಷಪರ್ವನ ಮಗಳು. ಯಯಾತಿಯ ಕಿರಿಯ ಪತ್ನಿ. ಗಾಂಧರ್ವ ವಿಧಿಯಂತೆ ಅವರಿಗೆ ವಿವಾಹವಾಯಿತು. (ನೋಡಿ. ಮಹಾಭಾರತ, ಆದಿ 63, 69, 72.76) ಶರ್ಮಿಷ್ಠೆ ಶಕುಂತಲೆಯರಲ್ಲಿ ಹೋಲಿಕೆ ಗಮನೀಯವಾಗಿದೆ.

सम्राजं-सम्यक् राजते असौ सम्राट् ಚಕ್ರವರ್ತಿ.

वरः खल्वेषः नाशीः ಇದು ವರವೇ ಸರಿ; ಕೇವಲ ಆಶೀರ್ವಾದವಲ್ಲ. ಪ್ರಸನ್ನವಾಗಿರುವ ದೇವತಾದಿಗಳ ಅನುಗ್ರಹವಾದ ವರ, ಸಿದ್ಧಿಸಿಯೇ ತೀರುವ ಲಕ್ಷಣವುಳ್ಳದ್ದು. ಆಶೀರ್ವಾದ ಸಿದ್ಧಿಸಬಹುದು; ಇಲ್ಲದಿರಬಹುದು.

ಪದ್ಯ—8 (ಅನ್ವಯ) वेदिं परितः क्लृप्तधिष्ण्याः समिद्वन्तः प्रान्तसंस्तीर्णदर्भाः हव्यगन्धैः दुरितम् अपघ्नन्तः अमी वैतानाः वह्नयः त्वां पावयन्तु ॥

"ವೇದಿಯ ಸುತ್ತಲೂ ಗೊತ್ತುಪಡಿಸಿರುವ ಸ್ಥಾನಗಳನ್ನು ಹೊಂದಿ ಸಮಿತ್ತುಗಳಿಂದ ಕೂಡಿದ, ಅಂಚಿನಲ್ಲಿ ಹರಡಿರುವ ದರ್ಭೆಗಳುಳ್ಳ ಮತ್ತು ಹವಿಸ್ಸಿನ ಸುಗಂಧದಿಂದ ದುರಿತವನ್ನು ನಿವಾರಿಸುವ ಯಾಗಾಗ್ನಿ ನಿನ್ನನ್ನು ಪಾವನಗೊಳಿಸಲಿ."

ಈ ಶ್ಲೋಕವು ಒಂದೊಂದರಲ್ಲೂ ಹನ್ನೊಂದಕ್ಷರಗಳುಳ್ಳ ನಾಲ್ಕು ಪಾದಗಳಿಂದ ಕೂಡಿದ 'ತ್ರಿಷ್ಟುಪ್ ಚತುಷ್ಪದಾ' ಎಂಬ ವೈದಿಕ ಛಂದಸ್ಸಿನಲ್ಲಿದೆ. ಗಣಾದಿವಿನ್ಯಾಸಗಳಲ್ಲಿ ಹೆಚ್ಚು ಸ್ವಾತಂತ್ರ್ಯವಿರುವ ವೈದಿಕ ಛಂದಸ್ಸಿನ ರಚನೆಯ ಪ್ರಯತ್ನದಲ್ಲಿ ಕಾಳಿದಾಸ ತೊಡಗಿರುವ ವಿಚಾರ ಇದರಿಂದ ಸ್ಪಷ್ಟವಾಗುತ್ತದೆ. ಈ ರಚನೆ "ಕಾವ್ಯದ ಛಂದಸ್ಸಿನ ದೃಷ್ಟಿಯಿಂದ ಅನಿಯಮಿತವೂ, ವೈದಿಕ ಛಂದಸ್ಸಿನ ದೃಷ್ಟಿಯಿಂದ ಅತಿನಿಯಮಿತವೂ" ಆಗಿರುವುದನ್ನು ಗಮನಿಸಬಹುದು.

क्लृप्तधिष्ण्याः ಸ್ಥಾನವನ್ನು ಗೊತ್ತುಪಡಿಸುವ; क्लृप्तानि धिष्ण्यानि येषां ते.
वैतानाः— ಯಾಗ ಸಂಬಂಧಿ, वितानस्य इमे वैतानाः, पावयन्तु ಶುದ್ಧೀಕರಿಸಲಿ.
प्रतिष्ठस्व–प्र + √स्था, लोट् ಏಕ ಪರಸ್ಮೈಪದ, ಆದರೆ सं, अव. प्र, वि, ಈ ಉಪಸರ್ಗಗಳಿಂದ ಕೂಡಿದಾಗ ಆತ್ಮನೇಪದವಾಗುತ್ತದೆ – समवप्रविभ्यः स्थः— ಪಾ I. 3. 22.

ಪದ್ಯ–9 (ಅನ್ವಯ) युष्मासु अपीतेषु या प्रथमं जलं पातुं न व्यवस्यति, या प्रियमण्डना अपि भवतां स्नहेन पल्लवं न आदत्ते, वः आद्ये कुसुमप्रसूति-समये यस्याः उत्सवः भवति, सा इयं शकुन्तला पतिगृहं याति, सर्वैः अनुज्ञायताम् ॥

"ನೀವು ನೀರನ್ನು ತೆಗೆದುಕೊಳ್ಳದಿರುವಾಗ ಯಾರು ತಾನು ಮೊದಲು ನೀರನ್ನು ಕುಡಿಯುವ ಪ್ರಯತ್ನಮಾಡುವುದಿಲ್ಲವೋ, ಅಲಂಕಾರಪ್ರಿಯಳಾಗಿದ್ದರೂ ಯಾರು ನಿಮ್ಮ ಮೇಲಣ ಸ್ನೇಹದಿಂದ ಚಿಗುರುಗಳನ್ನು ಕೀಳುವುದಿಲ್ಲವೋ, ಯಾರಿಗೆ ನಿಮ್ಮ ಮೊದಲಿನ ಕುಸುಮೋದಯ ಉತ್ಸವವಾಗುತ್ತದೋ, ಅಂತಹ ಶಕುಂತಲೆ ಪತಿಗೃಹಕ್ಕೆ ಹೋಗುತ್ತಾಳೆ. ಅನುಮತಿ ಕೊಡಿ."

ಶಕುಂತಲೆಗೂ ವನಪ್ರದೇಶದ ಗಿಡಮರಗಳಿಗೂ ಇದ್ದ ಸಂಬಂಧ ಎಷ್ಟು ನಿಕಟವೆಂಬುದನ್ನು ಈ ಶ್ಲೋಕ ಚಿತ್ರಿಸುತ್ತದೆ. ಮಾನವ–ಪ್ರಕೃತಿ ಬಾಂಧವ್ಯ ಪ್ರತಿಪಾದನೆ ಕಾಳಿದಾಸನಿಗೆ ಪ್ರಿಯವಾದುದು; ಈ ಶ್ಲೋಕ ಅದಕ್ಕೆ ಒಂದು ಮಹಾ ನಿದರ್ಶನ. अपीतेषु—ನೀವು ಇನ್ನೂ ಪಾನ ಮಾಡದಿರುವಾಗ. पा ಧಾತುವಿನ ಕರ್ಮಣಿ ಭೂತ ಕೃದಂತ ರೂಪ, गत, स्थित ಮುಂತಾದವುಗಳಂತೆ ಕರ್ತರಿಯ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. न आदत्ते ಕೀಳುವುದಿಲ್ಲ..

ಪದ್ಯ–10 (ಅನ್ವಯ) कमलिनीहरितैः सरोभिः रम्यान्तरः छायाद्रुमैः नियमितार्कमयूखतापः, कुशेशयरजोमृदुरेणुः अस्याः पन्थाः शान्तानुकूलपवनः च शिवः च भूयात् ॥

"ಅವಳ ಪ್ರಯಾಣದ ಮಾರ್ಗ ಕಮಲವನದ ಹಸಿರುಳ್ಳ ಸರೋವರಗಳಿಂದ ರಮ್ಯವಾಗಿ, ಅಲ್ಲಿನ ಸೂರ್ಯರಶ್ಮಿಯ ತಾಪವು ನೆರಳನ್ನು ಕೊಡುವ ತರುಗಳಿಂದ ಕಡಿಮೆಯಾಗಿ, ಆದರ ಧೂಳು ಕಮಲದ ರೇಣುಗಳಿಂದ ಮೃದುಗೊಳಿಸಲ್ಪಟ್ಟು, ಶಾಂತವೂ ಸುಖಕರವೂ ಆದ ಮಾರುತವುಳ್ಳದ್ದೂ, ಮಂಗಳಕರವೂ ಆಗಲಿ."

ಶಕುಂತಲೆಗೆ ಸುಖಪ್ರಯಾಣವನ್ನು ಕೋರುತ್ತಾ ವನದೇವತೆಗಳು ಹೇಳುವ ಮಾತುಗಳು ಇವು. रम्यान्तरः रम्याणि अन्तराणि यस्य सः ಮಧ್ಯವರ್ತಿ ದೂರ ರಮ್ಯವಾಗಿದ್ದು. छायाद्रुमैः—छायाप्रधानाः द्रुमाः तैः—ಮಧ್ಯಮಪದಲೋಪಿ, ತತ್ಪುರುಷ ಸಮಾಸ, शाकपार्थिव ಗುಂಪಿಗೆ ಸೇರಿದೆ. कुशेशयरजोमृदुरेणुः—कुशे जले शेते इति कुशेशयम् (ಅಲುಕ್ ಸಮಾಸ), कुशेशयरजोभिः....मृदुः, कुशे

रेणुः यस्य सः। जाते—जाता ಎಂಬುದರ ಸಂಬೋಧನ ರೂಪ, ಏಕ, 'ಮಗು' ಎಂದು ಅಕ್ಕರೆಯಿಂದ ಕರೆಯುವ ಅರ್ಥದಲ್ಲಿ.

समवस्था—ಸಮಾನಸ್ಥಿತಿ–ಆಶ್ರಮಪ್ರದೇಶಕ್ಕೂ ಮಂಕು ಕವಿದಿತ್ತು.

ಪದ್ಯ-11 (ಅನ್ವಯ) मृगाः उद्गलितदर्भकवलाः, मयूराः परित्यक्तनर्तनाः अपसृतपाण्डुपत्राः लताः अश्रूणि मुञ्चन्ति इव ॥

"ಜಿಂಕೆಗಳು ತುತ್ತಿನ ಹುಲ್ಲನ್ನು ಕೆಳಗೆ ಬೀಳಿಸಿವೆ; ನವಿಲುಗಳು ನರ್ತನವನ್ನು ನಿಲ್ಲಿಸಿವೆ. ಉದುರುತ್ತಿರುವ ಹಣ್ಣೆಲೆಗಳಿಂದ ಕೂಡಿದ ಲತೆಗಳು ಕಣ್ಣೀರನ್ನು ಸುರಿಸುವಂತಿದೆ"–ಇನ್ನೇನು ಉಂಟಾಗಲಿರುವ ಅಗಲಿಕೆಗೆ ತಪೋವನದ ಈ ಬಗೆಯ ಪ್ರತಿಕ್ರಿಯೆ ಅತ್ಯಂತ ಹೃದಯಸ್ಪರ್ಶಿಯಾಗಿದೆ.

उद्गलित....कवलाः—उद्गलिताः (उत्+गल ಕರ್ಮಣಿ ಭೂತ ಕೃದಂತ—ಹೊರಕ್ಕೆ ಬೀಳಿಸು) दर्भाणां कवलाः याभिः ताः, मृग्यः।

परि....नर्तनाः ನೃತ್ಯವನ್ನು ತ್ಯಜಿಸಿರುವ, परित्यक्तं नर्तनं यैः ते। अप.... पत्राः—पाण्डूनि च तानि पत्राणि च। अपसृतानि पाण्डुपत्राणि यासां ताः एतादृशाः लताः ಉದುರುತ್ತಿರುವ ಹಣ್ಣೆಲೆಗಳುಳ್ಳ, ಲತೆಗಳಿಂದ ಕೂಡಿ.

आमन्त्रयिष्ये ಬೀಳ್ಕೊಡುವೆನು. सोदर्यास्नेहम्-समाने उदरे शयिता सोदर्या, तस्यां स्नेहः तं, ಅಥವಾ सोदर्यायां स्नेहः तम्. दक्षिणेन, एनप् ಅಂತವಾದ ಅವ್ಯಯ (ಪಾ. V. 3. 35 एनबन्यतरस्यामदूरेऽपञ्चम्याः ।) शाखाबाहाभिः—शाखा एव बाहाः ताभिः (बाहा ಮತ್ತು बाहु ಸಮಪದಗಳು.)

इतः प्रतिपद्यस्व—ಮಾರ್ಗಗಾಮಿಯಾಗು.

निक्षेप—ಅಡವಿನ ವಸ್ತು; ಈ ಅಂಕದ ಕಡೆಯ ಶ್ಲೋಕದಲ್ಲಿರುವಂತೆ न्यास.

अलं रुदित्वा—त्वा ಪ್ರತ್ಯಯಾಂತ ಕೃದಂತ, अलं ನಿಷೇಧಾರ್ಥಕವಾಗಿರುತ್ತದೆ.

ಪದ್ಯ-12 (ಅನ್ವಯ) यस्य कुशसूचिविद्धे मुखे त्वया व्रणविरोपणं इङ्गुदीनां तैलं न्यषिच्यत, सः अयं श्यामाकमुष्टिपरिवर्धितकः पुत्रकृतकः मृगः ते पदवीं न जहाति ॥

"ಹಿಡಿ ಹಿಡಿ ಸಾವೆಯ ಹುಲ್ಲಿನಿಂದ ಬೆಳೆಸಿರುವ ನಿನಗೆ ಕೃತಕಪುತ್ರನಂತಿರುವ ಆ ಜಿಂಕೆ—ಕುಶದ ಸೂಜಿಮೊನೆ ಅದರ ಬಾಯನ್ನು ಚುಚ್ಚಿದಾಗ ಗಾಯವನ್ನು ವಾಸಿಮಾಡುವ ಇಂಗುದೀ ತೈಲವನ್ನು ನಿನ್ನಿಂದ ಸವರಿಸಿಕೊಂಡ ಅದು—ಈಗ ನಿನ್ನನ್ನು ಮುಂದೆ ಹೋಗಲು ಬಿಡದು."

ಶಕುಂತಲೆಯ ಮುದ್ದಿನ ಸಾಕುಮಗು, ಮರಿಜಿಂಕೆ; ಅವಳನ್ನು ಬಿಟ್ಟುಹೋಗಲಾರದು. ಆ ಪ್ರಾಣಿಯ ವಿಚಾರದಲ್ಲಿ ಶಕುಂತಲೆಗಿದ್ದ ಮಾತೃಪ್ರೇಮವನ್ನು ಇಲ್ಲಿ ಕಾಶ್ಯಪಮುನಿ ವರ್ಣಿಸುತ್ತಾನೆ.

व्रणविरोपणम्—विरोपयतीति विरोपणम, ವಾಸಿಮಾಡುವ. व्रणस्य विरोपणम्.
इङ्गुदीनाम् ಎಣ್ಣೆಯ ಅಂಶ ಹೆಚ್ಚಾಗಿರುವ ಗಾರ ಹಣ್ಣು, ಅದರ ಮರ.
श्यामा....तकः—श्यामाकानां (ಸಾವೆ) मुष्टयः तैः परिवर्धितकः (ಅನುಕಂಪೆಯ ಅರ್ಥದಲ್ಲಿ क ಪ್ರತ್ಯಯ); ಈ ಸಮಾಸಪದ मृगः ಎಂಬುದರೊಡನೆ ಹೊಂದಿ ಕೊಂಡಿದೆ. जहाति √हा. 3. ಲಟ್. ಪ್ರ. ಪು., ಏಕ.

ಪದ್ಯ—13 (ಅನ್ವಯ) उत्पक्ष्मणोः नयनयोः उपरुद्धवृत्तिं बाष्पं स्थिरतया विहतानुबन्धं कुरु! अलक्षितनतोन्नतभूमिभागे अस्मिन् मार्गे ते पदानि विषमीभवन्ति खलु ॥

ಸ್ಥಿರಚಿತ್ತಳಾಗಿ, ಮೇಲೆತ್ತಿರುವ ರೆಪ್ಪೆಗಳಿಂದ ಕೂಡಿದ ಕಣ್ಣುಗಳ ಚಲನಕ್ಕೆ ಅಡ್ಡಿಯುಂಟುಮಾಡುತ್ತಿರುವ ಕಣ್ಣೀರು ಧಾರೆಯನ್ನು ನಿಲ್ಲಿಸು. ನೆಲದ ಉಬ್ಬು ತಗ್ಗುಗಳು ಗೋಚರವಾಗದೆ, ನಿನ್ನ ಹೆಜ್ಜೆಗಳು ನಿಜಕ್ಕೂ ವಿಷಮವಾಗುತ್ತವೆ."

ಶೋಕಿಸುವುದನ್ನು ನಿಲ್ಲಿಸಬೇಕೆಂದು ಕಾಶ್ಯಪಮುನಿ ಶಕುಂತಲೆಗೆ ಒತ್ತಾಯ ಪೂರ್ವಕವಾಗಿ ಹೇಳುತ್ತಾನೆ.

उत्पक्ष्मणोः—उद्गतानि पक्ष्माणि ययोः तयोः ।
विहतानुबन्धम—विहतः अनुबन्धः यस्य तम् ತಡೆಯಿಲ್ಲದೆ. विषमीभवन्ति ಅಸಮವಾಗುತ್ತವೆ.

ओदकान्तात् — ನೀರಿನ ದಡದವರೆಗೆ, आ + उदकान्तात्–'ಅಲ್ಲಿನವರೆಗೆ' ಎಂಬ ಅರ್ಥದಲ್ಲಿ 'आ' ಪ್ರಯೋಗವಿದ್ದಲ್ಲಿ ಅದರೊಡನಿರುವ ನಾಮಪದ ಪಂಚಮೀ ವಿಭಕ್ತಿಯಲ್ಲಿರುತ್ತದೆ. (ಪಾ. आङ्मर्यादावचने). क्षीरवृक्षच्छायायां ಉದುಂಬರದ ನೆರಳಿನಲ್ಲಿ; ಹಾಲಿನಂತಹ ದ್ರವವನ್ನು ಸುರಿಸುವ ವೃಕ್ಷ.

दुष्करं करोमि—ಕಷ್ಟಸಾಧ್ಯವಾದುದನ್ನು ಅನುಭವಿಸುತ್ತಿದ್ದೇನೆ.

ಪದ್ಯ—14 (ಅನ್ವಯ) एषा अपि प्रियेण विना विषाददीर्घतरां रजनीं गमयति । आशाबन्धः गुरु अपि विरहदुःखं साहयति ॥

"ಆ ಚಕ್ರವಾಕಿಯೂ ಪ್ರಿಯನಿಲ್ಲದೆ ಶೋಕದಿಂದ ದೀರ್ಘೀಕೃತವಾದ ರಾತ್ರಿಯನ್ನು ಕಳೆಯುತ್ತಿದೆ. ವಿಯೋಗದುಃಖ ಎಷ್ಟು ತೀವ್ರವಾಗಿದ್ದರೂ ಆಶೆಯ ಬಂಧ ಅದನ್ನು ಸಹ್ಯವಾಗಿಸುತ್ತದೆ.''

साहयति — ಸಹಿಸಿಕೊಳ್ಳಲು ಶಕ್ತರನ್ನಾಗಿ ಮಾಡುತ್ತದೆ. √सह् — ಇದರ ಪ್ರೇರಣಾರ್ಥಕ ರೂಪ; ಹೋಲಿಸಿ. आशाबन्धः कुसुमसदृशो प्रायशो ह्यङ्गनानां, सद्यःपाति प्रणयिहृदयं विप्रयोगे रुणद्धि ॥ ಮೇಘ ಸಂದೇಶ. I. 10.

ಪದ್ಯ—15 (ಅನ್ವಯ) अस्मान् संयमधनान् आत्मनः उच्चैः कुलं च त्वयि अस्याः कथमपि अबान्धवकृतां तां स्नेहप्रवृत्तिं च साधु विचिन्त्य त्वया

इयं सामान्यप्रतिपत्तिपूर्वकं दारेषु दृश्या। अतःपरं भाग्यायत्तम्। तत् वधूबन्धुभिः न खलु वाच्यम् ॥

"ತಪೋಧನರಾದ ನಮ್ಮನ್ನೂ, ನಿನ್ನ ಉಚ್ಚವಂಶವನ್ನೂ, ಬಂಧುಗಳಿಗೆ ತಿಳಿಯದೆ ಇವಳಲ್ಲಿ ನೀನು ಬೆಳೆಸಿರುವ ಸ್ನೇಹವನ್ನೂ ಚೆನ್ನಾಗಿ ಮನಸ್ಸಿಗೆ ತಂದು ಕೊಂಡು, ಈ ಶಕುಂತಲೆ ನಿನ್ನ ಪತ್ನಿಯರಲ್ಲಿ ಸಮನಾಗಿರುವ ಗೌರವಕ್ಕೆ ಪಾತ್ರ ಳಾಗಿರುವಂತೆ ವರ್ತಿಸು. ಮುಂದಿನ ವಿಷಯ ಅದೃಷ್ಟಕ್ಕೆ ಸೇರಿದ್ದು. ಅದು ವಧುವಿನ ಬಂಧುಗಳಿಂದ ಹೇಳಿಸಿಕೊಳ್ಳಬೇಕಿಲ್ಲದ ಅಂಶ."

ಕಾಶ್ಯಪಮುನಿ ದುಷ್ಯಂತನಿಗೆ ಕಳಿಸುವ ಈ ಸಂದೇಶ ಬಹು ಅರ್ಥಗರ್ಭಿತ ವಾಗಿದೆ. ತಪೋಧನರಿಗೆ ಪ್ರಾಪಂಚಿಕ ಐಶ್ವರ್ಯವಿಲ್ಲದಿರಬಹುದು; ಆದರೆ ಅವರ ಸಂಯಮಾದಿ ಗುಣಗಳು ಶಕ್ತಿಯುತವಾದವು. ದುಷ್ಯಂತ ರಹಸ್ಯದಲ್ಲಿ ಶಕುಂತಲೆ ಯೊಡನೆ ಬೆಳಸಿದ ಪ್ರಸಂಗ, ಮನ್ನಣೆಗೆ ಅರ್ಹವಾದುದು; ಅಲ್ಲದೆ ಶಕುಂತಲೆ ಇತರ ಪತ್ನಿಯರಂತೆ ಗೌರವಿಸಲ್ಪಡಬೇಕು—ಈ ಕೆಲವು ಅಭಿಪ್ರಾಯಗಳನ್ನು ಸೂಕ್ತವಾಗಿ ತಿಳಿಯಪಡಿಸುವುದು ಸಂದೇಶದ ಉದ್ದೇಶ. ದುಷ್ಯಂತ ಹಿಂದುಮುಂದು ನೋಡದೆ ಶಕುಂತಲೆಯನ್ನು ಅಂಗೀಕರಿಸಬೇಕಾದುದೂ, ಶಕುಂತಲೆಯ ಭವಿಷ್ಯತ್ ಸುಖವೂ ಆ ಸಂದೇಶದಿಂದ ಸಾಧಿತವಾಗಬೇಕಾದ ವಿಷಯಗಳು.

सामान्यप्रतिपत्तिपूर्वकम् ಸಮನಾದ ಗೌರವಪೂರ್ವಕವಾಗಿ. सामान्या प्रतिपत्तिः, सामान्यप्रतिपत्तिः पूर्वं यस्मिन कर्मणि यथा तथा.

भाग्यायत्तम्—ಭಾಗ್ಯಕ್ಕೆ ಸೇರಿದ್ದು. भाग्ये आयत्तम्.

अनुशासनीया असि—ಉಪದೇಶಾರ್ಹಳಾಗಿದ್ದೀಯೆ.

लौकिकज्ञः—ಪ್ರಪಂಚದ ವ್ಯವಹಾರವನ್ನು ಬಲ್ಲವರು, लौकिकं जानन्ति ते।

ಪದ್ಯ—16 (ಅನ್ವಯ) गुरून् शुश्रूषस्व, सपत्नीजने प्रियसखीवृत्तिं कुरु, रोषणतया विप्रकृता अपि भर्तुः प्रतीप मा गमः परिजने भूयिष्ठं दक्षिणा भव, भाग्येषु अनुत्सेकिनी। एवं युवतयः गृहिणीपदं यान्ति। वामाः कुलस्य आधयः ॥

"ಗುರುಹಿರಿಯರ ಸೇವೆಮಾಡು. ಸಪತ್ನಿಯರೊಂದಿಗೆ ಸಖ್ಯದಿಂದ ವರ್ತಿಸು. ಕುಪಿತನಾಗಿ ನಿನ್ನಲ್ಲಿ ತಪ್ಪೆಸಗಿದರೂ ಪತಿಗೆ ವಿರುದ್ಧವಾಗಿ ನಡೆದುಕೊಳ್ಳಬೇಡ. ಪರಿ ಜನರಲ್ಲಿ ದಾಕ್ಷಿಣ್ಯದಿಂದಿರು. ಭಾಗ್ಯದಲ್ಲಿ ಗರ್ವಪಡಬೇಡ. ಹೀಗೆ ಯುವತಿಯರು ಗೃಹಿಣೀಪದವಿಯನ್ನು ಸೇರುತ್ತಾರೆ; ಹಾಗಿಲ್ಲದವರು, ಕುಲಕ್ಕೆ ಕಳಂಕ.

ಇದು ಕಾಶ್ಯಪಮುನಿ ಶಕುಂತಲೆಗೆ ಕೊಡುವ ಉಪದೇಶ. ವೃದ್ಧಸೇವೆ, ಸ್ನೇಹ, ದಾಕ್ಷಿಣ್ಯ, ನಿರಹಂಕಾರ ಮುಂತಾದ ಗುಣಗಳ ಮೂಲಕ ಶಕುಂತಲೆ ಗೃಹಿಣಿಯಾಗಿ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾಗಿದೆ.

शुश्रूषस्व. श्रु — ಇಚ್ಛಾರ್ಥಕವಾಗಿದ್ದಾಗ ಆತ್ಮನೇಪದಿಯಾಗಿರುತ್ತದೆ. ಪಾ. 1.3.57, ज्ञाश्रुस्मृदृशां सनः)

रोषणातया—रुष्यति तच्छीला रोषणा, रोषणायाः भावः रोषणता, तया मा स्म गमः—(1) 'मा' (माङ्) ಪ್ರಯೋಗವಿದ್ದಲ್ಲಿ ಅದರೊಡನೆ 'लुङ्' ಕ್ರಿಯಾಪದವಿರಬೇಕು ; (2) मा ಮತ್ತು स्म ಗಳಿದ್ದರೆ, ವಿಕಲ್ಪವಾಗಿ लङ् ಅಥವಾ लुङ् ಇರುತ್ತದೆ. (3) ಅಲ್ಲದೆ, ಅಂತಹ लङ् ಅಥವಾ लुङ् ಕ್ರಿಯಾಪದದ 'अ' ಕಾರಕ್ಕೆ ಲೋಪ ಬರುತ್ತದೆ. ಇವು ಕ್ರಮವಾಗಿ ಪಾ. माङि लुङ्, स्मोत्तरे लङ् च ಮತ್ತು न माङ्योगे ಈ ಸೂತ್ರಗಳನ್ನನುಸರಿಸಿವೆ.

अनुत्सेकिनी — उत्सेकः अस्यास्तीति उत्सेकिनी, न उत्सेकिनी अनुत्सेकिनी. वामा ಪ್ರತಿಯಾಗಿರತಕ್ಕವರು.

ಪದ್ಯ—17 (ಅನ್ವಯ) अभिजनवतः भर्तुः श्लाघ्ये गृहिणीपदे स्थिता, तस्य विभवगुरुभिः कृत्यैः प्रतिक्षणम् आकुला, अचिरात् प्राची इव अर्कं पावनं तनयं प्रसूय, वत्से मम विरहजां शुचं न गणयिष्यसि ।।

"ಸತ್ಕುಲಪ್ರಸೂತನಾದ ಪತಿಯ ಗೌರವಾನ್ವಿತ ಗೃಹಿಣಿಯ ಸ್ಥಾನದಲ್ಲಿದ್ದು, ಕ್ಷಣಕ್ಷಣಕ್ಕೂ, ಸಂಪತ್ತಿನಿಂದ ಗುರುತರವಾದ (ಪತಿಯ) ಕರ್ತವ್ಯಗಳಲ್ಲಿ ವ್ಯಗ್ರಳಾಗಿ, ಪೂರ್ವದಿಕ್ಕು ಸೂರ್ಯನಿಗೆ ಜನ್ಮಕೊಡುವಂತೆ ಶೀಘ್ರದಲ್ಲೇ, ಪಾವನಗೊಳಿಸುವ ಪುತ್ರನಿಗೆ ಜನ್ಮಕೊಟ್ಟು, ಮಗಳೇ, ನೀನು ನನ್ನ ಅಗಲುವಿಕೆಯಿಂದುಂಟಾದ ಶೋಕವನ್ನು ಗಣನೆಗೆ ತಂದುಕೊಳ್ಳುವುದಿಲ್ಲ.

अभिजनवतः—ಸತ್ಕುಲಪ್ರಸೂತನಾದ, भर्तुः ಎಂಬುದರೊಡನೆ ಹೊಂದಿಕೊಂಡಿದೆ. प्राची ಪೂರ್ವದಿಕ್ಕು. ಶಕುಂತಲೆಯನ್ನು ಸಮಾಧಾನಪಡಿಸುತ್ತಾ ಕಾಶ್ಯಪ ಈ ಮಾತುಗಳನ್ನು ಹೇಳುತ್ತಾನೆ. ಪತಿಗೃಹದಲ್ಲಿ ಶ್ಲಾಘನೀಯವಾದ ಗೃಹಿಣೀ ಸ್ಥಾನವನ್ನು ಪಡೆದು, ಪತಿಯ ಗುರುತರ ಕಾರ್ಯಗಳಲ್ಲಿ ಭಾಗವಹಿಸುವ ಚಿಂತೆಯುಳ್ಳವಳಾಗಿ, ಕಾಶ್ಯಪನ ಅಗಲುವಿಕೆಯಿಂದುಂಟಾದ ಶೋಕ ಕ್ರಮೇಣ ಶಕುಂತಲೆಗೆ ಗಣನೆಗೆ ಬಾರದೆ ಹೋಗುತ್ತದೆ.

गत्य... मन्थरः — ಗುರುತಿಸುವುದರಲ್ಲಿ ಅನುಮಾನವುಳ್ಳವನಾದರೆ. अति....शङ्की ಅತಿಯಾದ ಸ್ನೇಹವು ಕೆಟ್ಟದರ ಸಂಭವವನ್ನೇ ಯೋಚಿಸುವಂತೆ ಮಾಡುತ್ತದೆ.

युगान्तरम्—(ಅಂತರಿಕ್ಷದ) ಇನ್ನೊಂದು ಭಾಗ. अन्यत् युगम् ।

ಪದ್ಯ—18 (ಅನ್ವಯ) चिराय चतुरन्तमहीसपत्नी भूत्वा, अप्रतिरथं दौष्यन्तिं तनयं निवेश्य तदर्पितकुटुम्बभरेण भर्त्रा सार्धं अस्मिन् शान्ते आश्रमपदे पदं करिष्यसि ॥

"ಬಹುಕಾಲ ಚತುಸ್ಸಮುದ್ರಮೇಖಲಿತ ಭೂಮಿಯ ಸಪತ್ನಿಯಾಗಿದ್ದು, ಅನುಪಮವೀರನಾದ ಪುತ್ರ ದೌಷ್ಯಂತಿಯನ್ನು ವಿವಾಹಿತನನ್ನಾಗಿ ಮಾಡಿ, ಆವನಿಗೆ

(ನಿನ್ನ ಪತಿ) ಕುಟುಂಬದ ಭಾರವನ್ನು ವಹಿಸಿದನಂತರ, ನೀನು ಪತಿಯೊಡನೆ ಶಾಂತವಾದ ಈ ಆಶ್ರಮದಲ್ಲಿ ಪುನಃ ಹೆಜ್ಜೆ ಇಡುವೆ."

ದೀರ್ಘಕಾಲ ಶಕುಂತಲೆ ರಾಜ್ಞಿಯು ಸ್ಥಾನವನ್ನಲಂಕರಿಸಿ, ವೀರಪುತ್ರನನ್ನು ಪಡೆದು ಅವನಿಗೆ ಕ್ರಮೇಣ ಕುಟುಂಬ ಭಾರವನ್ನು ಅವಳ ಪತಿ ವಹಿಸಿದ ಅನಂತರ ಪತಿಯೊಡನೆ ಪುನಃ ಆಶ್ರಮಕ್ಕೆ ಬರುವಳೆಂದು ಕಾಶ್ಯಪನ ಆಶಯ; ಹಾಗೆ ಬರುವ ಸಂದರ್ಭ ವಾನಪ್ರಸ್ಥಾಶ್ರಮಕ್ಕನುಗುಣವೆಂಬ ಸೂಚನೆಯೂ ಇಲ್ಲಿದೆ.

चतु....सपत्नी ನಾಲ್ಕು (ಸಮುದ್ರಗಳು) ಮೇರೆಯುಳ್ಳ; चत्वारः अन्ताः यस्याः सा, चतुरन्ता चासौ मही च, चतुरन्तमह्याः सपत्नी

दौष्यन्तिम्—दुष्यन्तस्य अपत्यं दौष्यन्तिः, तम्

अप्रतिरथम् ಪ್ರತಿಸ್ಪರ್ಧಿಯಿಲ್ಲದ, अविद्यमानः प्रतिरथः यस्य तम्.

सार्धम् ಕೂಡ; ಇದರೊಡನೆ ನಾಮಪದ ಅಥವಾ ಸರ್ವನಾಮ ತೃತೀಯಾ ವಿಭಕ್ತಿಯಲ್ಲಿರುತ್ತದೆ.

अस्मिन्—करिष्यसि ಶಾಂತವಾದ ಈ ಆಶ್ರಮಕ್ಕೆ ಬರುವಿಯಂತೆ.

ಪದ್ಯ—19 (ಅನ್ವಯ) वत्से, त्वया रचितपूर्वं उटजद्वारविरूढं नीवारबलिं विलोकयतः मम शोकः कथं नु शमं एष्यति ?॥

"ಮಗೂ, ಈ ಮೊದಲು ನೀನು ಕೊಟ್ಟಿರುವ ಧಾನ್ಯಗಳ ಬಲಿ ಆಶ್ರಮ ದ್ವಾರದಲ್ಲಿ ಮೊಳಕೆಯಾಗುವುದನ್ನು ನೋಡುತ್ತಿರುವ ನನ್ನ ಶೋಕ ಹೇಗೆ ತಾನೇ ಇಂಗೀತು"?

बलि ಅಥವಾ भूतबलि ಭೂತತೃಪ್ತಿಗಾಗಿ ಅರ್ಪಿಸುವ भूतयज्ञಕ್ಕೆ ಸಮಾನವಾದುದು. ಮನೆಯ ಸುತ್ತಲೂ ಇರುತ್ತಾ ಅದನ್ನು ರಕ್ಷಿಸುವ ಗೃಹದೇವತೆಗಳಿಗೆ ಅದು ವಿಶೇಷವಾಗಿ ಸಮರ್ಪಿತವಾಗುವುದುಂಟು.

एष्यति—√इ. लट् ಪ್ರ. ಪು., ಏಕ. ಕಾಶ್ಯಪಮುನಿಯ ದುಃಖಕ್ಕೆ ಕೊನೆಯಿಲ್ಲ; ಅವನು ಅದನ್ನು ಮರೆಯುವಂತೆಯೂ ಇಲ್ಲ.

एवंदर्शिनी—ಇದಕ್ಕೆ ಕಾರಣ ಭೂತವಾದ एवं द्रष्टुं शीलमस्याः इति ।

ಪದ್ಯ–20 (ಅನ್ವಯ) कन्या परकीयः एव हि अर्थः, ताम् अद्य परिग्रहीतुः सम्प्रेष्य अयम् अन्तरात्मा प्रत्यर्पितन्यास इव प्रकामं विशदः जातः ॥

"ಪುತ್ರಿಯು ಪರಕೀಯಳೇ ಸರಿ. ಇಂದು ಅವಳನ್ನು ಪತಿಗೃಹಕ್ಕೆ ಕಳಿಸಿ ನನ್ನ ಮನಸ್ಸು ನ್ಯಾಸವೊಂದನ್ನು ಹಿಂತಿರುಗಿಕೊಟ್ಟರೆ ಹೇಗೋ ಹಾಗೆ ನಿರ್ಮಲಗೊಂಡಿದೆ"

प्रत्यर्पितन्यासः ನ್ಯಾಸವನ್ನು ಹಿಂದಕ್ಕೆ ಕೊಟ್ಟ, प्रत्यर्पितः न्यासः येन सः ।

विशदः—√शद् ಛೇದಿಸು-ಅದ್ದರಿಂದ ನಿರ್ಮಲ, ಶುದ್ಧ ಎಂಬ ಅರ್ಥ.

ಪುತ್ರಿಯನ್ನು ಪತಿಗೃಹಕ್ಕೆ ಹೊರಡಿಸಿ, ಅವಳನ್ನು ಬೀಳ್ಕೊಡುವಾಗ ಅಗಾಧ ಶೋಕವನ್ನು ವ್ಯಕ್ತಪಡಿಸಿದ ತಂದೆ, ಕಾಶ್ಯಪಮುನಿ ಕಡೆಯಲ್ಲಿ ಅವಳನ್ನು ಪತಿಯ ಬಳಿಗೆ ಕಳಿಸಿದ್ದರಿಂದ ಮನಸ್ಸಿಗೆ ನೆಮ್ಮದಿಯುಂಟಾಯಿತೆಂದು ಹೇಳಿದರೆ ಸ್ವಲ್ಪ ವಿರೋಧ ತೋರಬಹುದು. ವಾಸ್ತವವಾಗಿ ಅಲ್ಲಿ ವಿರೋಧವಿಲ್ಲ. ಏಕೆಂದರೆ, ಮೊದಲನೆಯದಾಗಿ ಪುತ್ರೀವಾತ್ಸಲ್ಯಕ್ಕನುಗುಣವಾದ ಶೋಕ ಕಾಶ್ಯಪಮುನಿಯದು; ಮತ್ತೊಂದು ಸನ್ನಿವೇಶದಲ್ಲಿ ಪುತ್ರಿಗೆ ಸಕಾಲದಲ್ಲಿ ವಿವಾಹಮಾಡಿ ಪತಿಯ ಬಳಿಗೆ ಕಳಿಸಬೇಕೆಂಬ ಧಾರ್ಮಿಕ ಪ್ರಜ್ಞೆ. ಹೀಗೆ, ಮೇಲ್ಕಂಡ ಶ್ಲೋಕದ ವಿಷಯ ಮತ್ತು ಹಿಂದಿನ ಶ್ಲೋಕ—ಇವು ಕನ್ಯಾಪಿತೃವಿನ ವ್ಯಕ್ತಿತ್ವದ ಎರಡು ಮುಖಗಳು. ಈ ಸಂದರ್ಭದಲ್ಲಿ ಭಾಸನ धर्मस्नेहान्तरे न्यस्ता दुःखिताः खलु मातरः । ಪ್ರತಿಜ್ಞಾ ಯೌ. II. 7.—ಈ ಮಾತುಗಳನ್ನು ಸ್ಮರಿಸಿಕೊಳ್ಳಬಹುದು.

# ಐದನೆಯ ಅಂಕ

[ಎಲ್ಲಿಂದಲೋ ಬರುತ್ತಿರುವ ರಾಗಪೂರ್ಣ ಗೀತೆಯನ್ನು ಆಲೈಸಿದ ರಾಜನು ಪರ್ಯುತ್ಸುಕಿಯಾಗುತ್ತಾನೆ; ಅದು ಅವನ ಪ್ರೇಯಸಿಯಾಗಿದ್ದ ಹಂಸಪದಿಕೆ ಅವನಲ್ಲಿದ್ದ ಪ್ರಣಯಚಾಂಚಲ್ಯಕ್ಕೋಸ್ಕರ ಪ್ರಚ್ಛನ್ನವಾಗಿ ನಿಂದೆಯುಳ್ಳಂತೆ ಹಾಡಿದ ಗೀತೆ. ಅಷ್ಟರಲ್ಲೇ ವೈತಾಲಿಕರು ಪಠಿಸಿದ ಶ್ಲೋಕದಿಂದ ಅವನಿಗೆ ಸ್ವಲ್ಪ ಹರ್ಷವುಂಟಾಗುತ್ತದೆ. ಅನಂತರ ಕಂಚುಕಿಯು ಪ್ರವೇಶಿಸಿ ಕಾಶ್ಯಪ ಮುನಿಯ ಸಂದೇಶವನ್ನು ರಾಜನಿಗೆ ತಲಪಿಸುವ ಇಚ್ಛೆಯುಳ್ಳ ಕೆಲವು ತಪಸ್ವಿ ಜನರು ಸ್ತ್ರೀಯರೊಡಗೂಡಿ ಬಂದಿರುವ ವಿಚಾರವನ್ನು ತಿಳಿಸುತ್ತಾನೆ. ಹಾಗೆ ಬಂದವರು ಶಾರ್ಙ್ಗರವ ಶಾರದ್ವತರು, ಶಕುಂತಲಾ ಗೌತಮಿಯರು, ಅಗ್ನಿ ಶರಣದಲ್ಲಿ ರಾಜನು ಅವರನ್ನು ಸಂದರ್ಶಿಸುವ ಏರ್ಪಾಡಾಗುತ್ತದೆ. ಅವರೆಲ್ಲರೂ ಅಲ್ಲಿ ಬಂದಾಗ, ಶಕುಂತಲೆ ಅವಗುಂಠನವತಿಯಾಗಿ (ಮುಸುಕಿನಿಂದ ಕೂಡಿ) ಇರುತ್ತಾಳೆ. ಕುಶಲ ಪ್ರಶ್ನೆಗಳಾದ ತರುವಾಯ ರಾಜನು ಆಪನ್ನಸತ್ವಳಾಗಿದ್ದ (ಗರ್ಭಿಣಿ) ಶಕುಂತಲೆಯನ್ನು ಪರಿಗ್ರಹಿಸಬೇಕೆಂದು ಕಾಶ್ಯಪಮುನಿ ಇಚ್ಛೆ ಪಟ್ಟಿರುವುನೆಂದು ತಾಪಸರು ನಿವೇದಿಸುತ್ತಾರೆ. ಅವಳನ್ನು ತಾನು ವಿವಾಹ ಮಾಡಿಕೊಂಡ ಬಗ್ಗೆ ದುಷ್ಯಂತ ಸಂಶಯವನ್ನು ವ್ಯಕ್ತಪಡಿಸುತ್ತಾನೆ. ಅಲ್ಲದೆ ಶಕುಂತಲೆಯೊಡನೆ ತಾನು ಯಾವ ಸಂಬಂಧವನ್ನೂ ಬೆಳಸಿಲ್ಲವೆಂದು ಹೇಳಿ ಅವಳನ್ನು ದುಷ್ಯಂತ ನಿರಾಕರಿಸುತ್ತಾನೆ; ತಾಪಸರ ಮತ್ತು ಶಕುಂತಲೆಯ ಒತ್ತಾಯ ಪೂರ್ವಕವಾದ ವಾದಗಳು ಅವಳನ್ನು ಅವನು ಅಂಗೀಕಾರ ಮಾಡುವ ವಿಚಾರದಲ್ಲಿ ಫಲಕಾರಿಗಳಾಗಲಿಲ್ಲ. ಅವನು ಸ್ಮರಣೀಯವಾಗಿ ಅವಳಿಗೆ ಕೊಟ್ಟಿದ್ದ ಉಂಗುರವನ್ನು ರುಜುವಾತಾಗಿ ತೋರಿಸಲು ಶಕುಂತಲೆ ಯತ್ನಿಸುತ್ತಾಳೆ. ಆದರೆ ಈಗ ಅದು ಅವಳ ಬೆರಳಲ್ಲಿಲ್ಲ; ಶಕ್ರಾವತಾರದಲ್ಲಿ ಶಚೀತೀರ್ಥವನ್ನು ವಂದಿಸಲು ಹೋದಾಗ ಕಳಚಿಬಿದ್ದು ಹೋಗಿರಬಹುದೆಂಬ ಅರಿವುಂಟಾಗಿ ಶಕುಂತಲೆ ನಿರಾಶಳಾಗುತ್ತಾಳೆ. ಶಾರ್ಙ್ಗರವ ಮುಂತಾದವರು ವಿಧಿಯಿಲ್ಲದೆ ಅವಳನ್ನು ಅಲ್ಲೇ ಬಿಟ್ಟು ಹಿಂತಿರುಗುತ್ತಾರೆ; ಅವಳ ವಿವಾಹ ವ್ರತ ಪವಿತ್ರವಾಗಿದ್ದರೆ ಪತಿಕುಲದಲ್ಲಿ ದಾಸ್ಯವನ್ನಾದರೂ ಅನುಭವಿಸಲೇ ಬೇಕೆಂಬ ಎಚ್ಚರಿಕೆಯನ್ನು ಅವರು ಹಾಗೆ ಹೊರಟಾಗ ಅವಳಿಗೆ ಕೊಡುತ್ತಾರೆ.

ಶಕುಂತಲೆಯನ್ನು ಅಂಗೀಕರಿಸುವ ವಿಚಾರದಲ್ಲಿ ನಡೆದ ಈ ಕೆಲವು ಘಟನೆಗಳು ಆಗಲೇ ಸಂಶಯದ ತೊಡಕಿನಲ್ಲಿ ಬಳಲುತ್ತಿದ್ದ ದುಷ್ಯಂತನ ಮನಸ್ಸಿನ ಮೇಲೆ ತೀವ್ರಪರಿಣಾಮವನ್ನುಂಟುಮಾಡುತ್ತವೆ; ದುರ್ವಾಸನ ಶಾಪದ ಪ್ರಭಾವದಿಂದ ವಿಸ್ಮೃತಿಯ ತೆರೆ ಅಡ್ಡ ಬಂದು ಶಕುಂತಲೆಯನ್ನು ಅಂಗೀಕರಿಸುವುದೋ ಬಿಡುವುದೋ ಎಂಬ ಸಮಸ್ಯೆ ಅವನನ್ನು ಅತಿಯಾಗಿ

ಪೀಡಿಸುತ್ತದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ, ರಾಜಪುರೋಹಿತನ ಸಲಹೆ-ಶಕುಂತಲೆ ಪ್ರಸವಿಸುವವರೆಗೂ ಅವನ ಮನೆಯಲ್ಲಿದ್ದು, ಅವಳಿಂದ ಜನ್ಮ ತಾಳುವ ಶಿಶು (ಚಕ್ರವರ್ತಿಯಾಗುವ ಪುತ್ರನನ್ನು ದುಷ್ಯಂತ ಪಡೆಯುವನೆಂದು) ಸಾಧುಗಳು ಕೊಟ್ಟ ಆದೇಶದಂತೆ, ಚಕ್ರವರ್ತಿಯ ಲಕ್ಷಣವುಳ್ಳ ಪುತ್ರನಾಗಿದ್ದ ಪಕ್ಷದಲ್ಲಿ ಅವಳನ್ನು ಅಂಗೀಕರಿಸಬಹುದೆಂಬುದು, ಇಲ್ಲವಾದರೆ ತಂದೆಯ ಸಮೀಪಕ್ಕೆ ಕಳುಹಿಸತಕ್ಕದ್ದು—ಇದಕ್ಕೆ ರಾಜನ ಒಪ್ಪಿಗೆ ದೊರಕುತ್ತದೆ. ಆದರೆ ಅಷ್ಟರಲ್ಲಿ ಒಂದು ವಿಚಿತ್ರ ಘಟನೆ ಸಂಘಟಿಸಿ ಸ್ತ್ರೀರೂಪದ ಒಂದು ಜ್ಯೋತಿ ಕಾಣಿಸಿಕೊಂಡು ಅವಳನ್ನು ಅಪ್ಸರತೀರ್ಥಕ್ಕೆ ಕೊಂಡೊಯ್ಯುತ್ತದೆ. ಕಡೆಯಲ್ಲಿ ದುಷ್ಯಂತ ಪ್ರಕ್ಷುಬ್ಧ ಹೃದಯದಿಂದ ನಿಷ್ಕ್ರಮಿಸುತ್ತಾನೆ.

[ಈ ಅಂಕದ ವೃತ್ತಾಂತಗಳು ನಡೆಯುವುದು ಹಸ್ತಿನಾಪುರದ ಅರಮನೆಯಲ್ಲಿ. ಬಹುಮಟ್ಟಿಗೆ ಈ ವೃತ್ತಾಂತಗಳು ಪ್ರಾರಂಭವಾಗುವುದು ಮಧ್ಯಾಹ್ನದಲ್ಲಿ. ಇಲ್ಲಿನ ಸಂಗತಿಗಳು ದಿನ ಪೂರ್ತಿವಾಗಿವೆ.]

ನಾಟಕೀಯ ಸ್ವಾರಸ್ಯ ಈ ಅಂಕದಲ್ಲಿ ತುತ್ತತುದಿಯನ್ನೇರುತ್ತದೆ. ದುಷ್ಯಂತ ಶಾಪಗ್ರಸ್ತನಾಗಿ ತನ್ನ ಶಕುಂತಲಾವಿಷಯಕ ಪ್ರೇಮವನ್ನು ಮರೆಯುತ್ತಾನೆ. ಉಂಗುರವನ್ನು ಕಳೆದುಕೊಂಡದ್ದು ಮತ್ತು ದುಷ್ಯಂತನಿಂದ ಶಕುಂತಲೆಯ ನಿರಾಕರಣೆ ಇವು ವಿಸ್ಮಯಕರ ಘಟನೆಗಳು. ಇಲ್ಲಿನ ಪಾತ್ರಗಳ ಮತ್ತು ಪ್ರಸಂಗಗಳ ಚಿತ್ರಣವು ಕಲಾಕೌಶಲ್ಯದಿಂದ ಕೂಡಿದೆ; ನಾಟಕದ 'ಕಾರ್ಯ' ತ್ವರಿತಗೊಳ್ಳಲು ಸಹಾಯಕವಾಗಿವೆ.]

(ಪುಟ 47)

ततः प्रविशति ರಾಜನ ಪ್ರವೇಶ, ಆಸನಾರೂಢನಾಗಿ.

स्वरसंयोगः ಸ್ವರಗಳ ಜೋಡಣೆ, ಸ್ವರಾಲಾಪ.

हंसपदिका ರಾಜನ ಒಬ್ಬ ವಲ್ಲಭೆ; ಇವಳ ವಿಚಾರ ಇಲ್ಲಿ ಒಂದೇ ಕಡೆ, (ತೆರೆಯ ಹಿಂದೆ ಹಾಡುತ್ತಿರುವುದಾಗಿ) ಸೂಚಿತವಾಗಿದೆ. ಅವಳ ಮಧುರ ಗೀತೆ ರಾಜನಲ್ಲಿ ಪರ್ಯುತ್ಸುಕತೆಯನ್ನುಂಟುಮಾಡುತ್ತದೆ.

वर्णपरिचयं ಗಾನಕ್ರಿಯಾಭ್ಯಾಸ.

ಪದ್ಯ—1 (ಅನ್ವಯ) मधुकर, अभिनवमधुलोलुपः त्वं चूतमञ्जरीं तथा परिचुम्ब्य कमलवसतिमात्रनिर्वृतः एनां कथं विस्मृतः असि ॥

"ಮಧುಕರವೇ, ನೀನು ಹಾಗೆ ಚೂತ ಮಂಜರಿಯನ್ನು ಚುಂಬಿಸಿ ನವಮಧುವನ್ನಪೇಕ್ಷಿಸುತ್ತಾ ಕಮಲವಸತಿಯಿಂದ ತೃಪ್ತನಾಗಿ, ಅದರ ವಿಚಾರವನ್ನು ಹೇಗೆ ಮರೆತಿದ್ದೀಯೆ ?"

अभि....लोलुपः ನವ ವಧುವಿನ ಆಶೆಯಿಂದ ಕೂಡಿ.

कमल....निर्वृतः ಕಮಲದಲ್ಲಿ ವಾಸಿಸುವ ತೃಪ್ತಿಯನ್ನು ಹೊಂದಿ, कमले वसतिः, कमलवसतिरेव कमलवसतिमात्रं तस्मिन् निर्वृतः ।

एनां—ಇದು चूतमञ्जरीं ಎಂಬುದಕ್ಕೆ ವಿಶೇಷಣವಾಗಿದೆ ; ಹಂಸಪದಿಕೆಯನ್ನು ಉಪೇಕ್ಷಿಸಿ ರಾಜನು ಬೇರೊಬ್ಬ ಪ್ರೇಯಸಿಯ ಪ್ರಣಯದಲ್ಲಿ ಆಸಕ್ತಿಯುಳ್ಳವ ನಾಗಿರುವುದರ ಬಗ್ಗೆ ಒಂದು ಪ್ರಚ್ಛನ್ನನಿಂದೆಯನ್ನು ಆವಳ ಈ ಗೀತೆಯಲ್ಲಿ ಕಾಣಬಹುದು. ಅಲ್ಲದೆ ಇದು ಶಕುಂತಲೆಯನ್ನು ಕುರಿತು ದುಷ್ಯಂತನ ಅನುರಾಗದ ವಿಸ್ಮರಣದ ಸೂಚಕವಾಗಿದೆಯೆಂದು ಹೇಳಬಹುದು.

रागपरिवाहिनी ಭಾವಪೂರ್ಣವಾಗಿರುವ

देवीं....अन्तरेण ದೇವಿ ವಸುಮತಿಗೆ ಸಂಬಂಧಪಟ್ಟ ; ಆವಳ ಬಗ್ಗೆ ರಾಜನ ಅನುರಾಗ ನವೀಕೃತವಾಗಿದೆ.

अन्तरेण ಇದರೊಡನೆ ಬರುವ ನಾಮಪದ ಅಥವಾ ಸರ್ವನಾಮ ದ್ವಿತೀಯಾ ವಿಭಕ್ತಿ ಯಲ್ಲಿರುತ್ತದೆ. ಉದಾ. अन्तरान्तरेण युक्ते·

शिखण्डके ಜುಟ್ಟಿನಲ್ಲಿ

नागरिकवृत्त्या ನಗರದಲ್ಲಿರುವ ನಡತೆಯನ್ನನುಸರಿಸಿ, ಚಾಕಚಕ್ಯತೆಯಿಂದ, नगरे भवः नागरिकः तस्य·वृत्त्या

इष्टजनविरहाद्दतेऽपि—ಪ್ರಿಯಜನ ವಿಯೋಗವಿಲ್ಲದಿದ್ದರೂ, ಶಾಪ ರಾಜನ ಮೇಲೆ ಪರಿಣಾಮ ಹೊಂದಿರುವುದರ ಸೂಚನೆ ಇಲ್ಲಿರಬಹುದು.

ಪದ್ಯ—2 (ಅನ್ವಯ) यत् सुखितः अपि जन्तुः रम्याणि वीक्ष्य मधुरान् शब्दान् च निशम्य पर्युत्सुकीभवति, तत् नूनं भावस्थिराणि जननान्तरसौहृदानि चेतसा अबोधपूर्वं स्मरति ॥

"ಮನೋಜ್ಞವಾದುದನ್ನು ನೋಡಿ, ಮಧುರ ಶಬ್ದಗಳನ್ನು ಕೇಳಿ ಸುಖಿಯೂ ಪರ್ಯುತ್ಸುಕನಾಗುತ್ತಾನೆ. ಇದು ನಿಜಕ್ಕೂ ಭಾವಗಳ ಮೂಲಕ ದೃಢವಾಗಿರುವ ಜನ್ಮಾಂತರ ಸ್ನೇಹಗಳನ್ನು ಅರಿವಿಲ್ಲದೆ ಅವನು ತನ್ನ ಮನಸ್ಸಿನಲ್ಲಿ ಸ್ಮರಿಸಿಕೊಳ್ಳುತ್ತಾ ನೆಂಬ ವಿಚಾರವನ್ನು ಕುರಿತದ್ದು."

पर्युत्सुकीभवति ತಳಮಳಿಸುತ್ತಾನೆ, पर्युत्सुकः भवति इति यत्. अबोधपूर्वं ಅರಿವಿಲ್ಲ ದೆಯೇ, बोधः पूर्वं यस्मिन् कर्मणि तत् तथा बोधपूर्वं, न बोधपूर्वं अबोधपूर्वं ಜನ್ಮಾಂತರ ಸ್ನೇಹಗಳು ವ್ಯಕ್ತಿಯಲ್ಲಿ ಶಾಶ್ವತವಾದ ಸಂಸ್ಕಾರಗಳನ್ನುಂಟುಮಾಡುವ ವಿಚಾರ ಈ ಶ್ಲೋಕದಲ್ಲಿದೆ. ಅದರ ಪ್ರಕಾರ ವ್ಯಕ್ತಿಯ ಇಂದಿನ ಸ್ಥಿತಿ ಪೂರ್ವಜನ್ಮದ ಕರ್ಮಗಳಿಂದ ಪ್ರಭಾವಿತವಾಗಿರುತ್ತದೆ. ಈ ವಿಷಯ ಭಾರತೀಯ ಮತಧರ್ಮ ಹಾಗೂ ದರ್ಶನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಪುನರ್ಜನ್ಮವಾದವನ್ನನು

ಸರಿಸಿ ಬಂದಿದೆಯೆಂದು ಹೇಳಬಹುದು. ಪ್ರಾಯಃ ಅದು ಶಕುಂತಲಾ ವಿಯೋಗಕ್ಕೆ ಸಂಬಂಧಪಟ್ಟಂತೆ ದುಷ್ಯಂತನಲ್ಲಿ ಒಂದು ಅನಿರ್ದಿಷ್ಟ ಭಾವದ ಸೂಚಕವಾಗಿದೆ.

अनतिपात्यं ತಡಮಾಡಲು ತಕ್ಕದಲ್ಲವಾದದ್ದು, अतिपातयितुं न योग्यं— ಧಾರ್ಮಿಕ ವಿಚಾರಗಳ ಮತ್ತು ಕರ್ತವ್ಯಗಳ ಬಗ್ಗೆ ದುಷ್ಯಂತನ ಆಸಕ್ತಿ ಇದರಿಂದ ತಿಳಿದುಬರುತ್ತದೆ.

लोक....कार ಲೋಕವ್ಯವಹಾರವನ್ನು ನಿಯಮಿತಗೊಳಿಸುವ ಅಧಿಕಾರ ಸ್ಥಾನ.

ಪದ್ಯ—3 (ಅನ್ವಯ) भानुः सकृद्युक्ततुरङ्गः एव । गन्धवहः रात्रिंदिवं प्रयाति । शेषः सदा एव आहितभूमिभारः । षष्ठांशवृत्तेः अपि एषः धर्मः ॥

"ಸೂರ್ಯ ಒಂದು ಸಲ ಮಾತ್ರ ಕುದುರೆಗಳನ್ನು (ರಥಕ್ಕೆ) ಕಟ್ಟಿದವನಾಗಿದ್ದಾನೆ; ಹಗಲು ರಾತ್ರಿಯೂ ಗಾಳಿ ಬೀಸುತ್ತದೆ; ಶೇಷ ಭೂಭಾರವನ್ನು ಸದಾ ಹೊತ್ತಿದ್ದಾನೆ; ಆರನೆಯ ಒಂದು ಭಾಗದಿಂದ ಜೀವಿಸುವವನ (ರಾಜನ) ಧರ್ಮವೂ ಅದೇ."

ರಾಜನ ಅಧಿಕಾರಸ್ಥಾನದಲ್ಲಿ ವಿಶ್ರಾಂತಿಯೆಂಬುದೇ ಇಲ್ಲವೆಂದು ಇಲ್ಲಿ ಹೇಳಲಾಗಿದೆ; ಸೂರ್ಯ, ಮಾರುತ ಮತ್ತು ಶೇಷ—ಇವರು ಅಂತಹ ವಿಶ್ರಾಂತಿ ರಹಿತ ಕರ್ತವ್ಯದ ವಿಚಾರದಲ್ಲಿ ಮೇಲ್ಪಂಕ್ತಿಗಳೆಂಬ ವಿಚಾರವೂ ಅಲ್ಲಿದೆ.

सकृद....तुरङ्गः—ಒಂದುಸಲ ಮಾತ್ರ ಕುದುರೆಗಳನ್ನು ಕಟ್ಟಿದವನಾಗಿ, सकृद युक्ताः तुरङ्गाः येन सः ।

गन्धवहः ಕಂಪನ್ನು ಒಯ್ಯುವವನು (ವಾಚ್ಯಾರ್ಥ) ಗಾಳಿ, ಮಾರುತ.

रात्रिंदिवम् ಹಗಲೂ ರಾತ್ರಿಯೂ—ಇದು ಪಾ. अचतुरविचतुर ಇತ್ಯಾದಿ—ಈ ಸೂತ್ರವನ್ನನುಸರಿಸಿ ನಿಷ್ಪನ್ನವಾಗಿದೆ; ಈ ಸೂತ್ರ ಪಾಣಿನಿಯ ಸೂತ್ರಗಳಲ್ಲಿ ಅತಿ ದೀರ್ಘವಾದುದು.

शेषः ಕದ್ರು ಕಶ್ಯಪರ ಪುತ್ರನಾದ ಪ್ರಸಿದ್ಧ ಸರ್ಪರಾಜನ ಹೆಸರು. ಬ್ರಹ್ಮನ ಅಪೇಕ್ಷೆಯಂತೆ ಭೂಮಿಯನ್ನು ಸದಾ ತಲೆಯ ಮೇಲೆ ಹೊರುವ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದಾನೆ. (ನೋಡಿ. ಮಹಾ. ಆದಿ. 36).

षष्ठांशवृत्तिः, षष्ठांशेन वृत्तिः यस्य सः, ರಾಜನು ತನ್ನ ಪ್ರಜೆಗಳು ಅರ್ಪಿಸಿದ ಆರನೆಯ ಒಂದು ಭಾಗ ಉತ್ಪನ್ನದ ಮೇಲೆ ಜೀವಿಸಬೇಕೆಂಬ ಧರ್ಮವಿದೆ; ಈ ಶ್ಲೋಕದ ಅಲಂಕಾರ प्रतिवस्तूपमा.

उपत्यका ಬೆಟ್ಟದ ತಪ್ಪಲು ಪ್ರದೇಶ.

अथ किम् ಹೌದು.

प्रतीहारी ದ್ವಾರಪಾಲಕಿ.

दुःखोत्तरा ದುಃಖಪೂರ್ಣವಾದುದು, ದುಃಖ ಪ್ರಧಾನವಾಗಿರುವಂತಹುದು.

(ಪುಟ 49)

ಪದ್ಯ—4 (ಅನ್ವಯ) प्रतिष्ठा औत्सुक्यमात्रम् अवसाययति । लब्धपरिपालनवृत्तिः एवं क्लिश्नाति । राज्यं स्वहस्तधृतदण्डं आतपत्रं इव यथा श्रमाय (तथा) अतिश्रमापनयनाय न भवति ॥

"ರಾಜಪದವಿಯು ಲಾಭ ಉತ್ಸುಕತೆಯನ್ನು ಕೊನೆಗಾಣಿಸುತ್ತದೆ; ಹಾಗೆ ಲಭಿಸಿದ್ದನ್ನು ರಕ್ಷಿಸುವ ಕೆಲಸ ಕ್ಲೇಶಕಾರಕವಾದುದು. ಕೈಯಲ್ಲಿ ಹಿಡಿದಿರುವ ದಂಡವುಳ್ಳ ಛತ್ರಿಯಂತೆ ರಾಜ್ಯ ಅತಿಶ್ರಮವನ್ನು ಪರಿಹರಿಸುವುದಕ್ಕಿಂತ ಹೆಚ್ಚಾಗಿ ಶ್ರಮಕಾರಕವೇ ಆಗಿದೆ."

प्रतिष्ठा ಉಚ್ಚಪದವಿ ; ಅದರ ಲಾಭ.

अवसाययति ಸಮಾಪ್ತಿಗೊಳಿಸುತ್ತದೆ.

लब्ध....वृत्तिः ಲಭಿಸಿದ್ದನ್ನು ಪಾಲಿಸುವ ಕೆಲಸ ಅಥವಾ ನಡೆವಳಿಕೆ.

स्वहस्त....दण्डम् ಕೈಯಲ್ಲಿ ಹಿಡಿದಿರುವ ದಂಡವುಳ್ಳ, स्वहस्ते धृतः दण्डः यस्य तत्· आतपत्रम् ಛತ್ರಿ नाति....नाय ಅತಿಶ್ರಮ ಪರಿಹಾರಕ್ಕಲ್ಲ, ಶ್ರಮಕ್ಕೆ ಕಾರಣವಾದ. ರಾಜಪದವಿ ಕ್ಲೇಶಗಳಿಂದ ತುಂಬಿದೆ; ಹೋಲಿಸಿ, "Uneasy lies the head that wears the crown". ('ಕಿರೀಟವನ್ನು ಧರಿಸಿರುವ ಶಿರಸ್ಸು ನೆಮ್ಮದಿ ಕಾಣದೆ ಇರತಕ್ಕದ್ದು').

वैतालिकः ಪ್ರಶಂಸಿಸುವ ಗಾಯಕ, ಚಾರಣ; विविधेन तालेन चरति । विविधतालः प्रयोजनमस्य इति वा ।

विजयतां—ಇಲ್ಲಿ √जि ಪರಸ್ಮೈಪದ, ಆದರೆ वि, परा ಇವುಗಳ ಪೂರ್ವಕವಾಗಿದ್ದರೆ ಆತ್ಮನೇ ಪದವಾಗುತ್ತದೆ—ಪಾ. विपराभ्यां जेः ।

ಪದ್ಯ—5 (ಅನ್ವಯ) स्वसुखनिरभिलाषः लोकहेतोः प्रतिदिनं खिद्यसे । अथवा ते वृत्तिः एवं विधा एव । पादपः हि मूर्ध्ना तीव्रम् उष्णम् अनुभवति, संश्रितानां छायया परितापं शमयति ॥

"ಸ್ವಸುಖದಲ್ಲಿ ಉಪೇಕ್ಷೆಯಿಂದ ನೀನು ಲೋಕಕ್ಕೋಸ್ಕರ ಶ್ರಮಿಸುತ್ತೀಯೆ; ಆದರೆ ಅದು ನಿನ್ನ ಕರ್ತವ್ಯದ ಲಕ್ಷಣ. ವೃಕ್ಷವು ತನ್ನ ತಲೆಯ ಮೇಲೆ ತೀವ್ರ ಉಷ್ಣವನ್ನನುಭವಿಸುತ್ತದೆ; ಮತ್ತು ನೆರಳಿನಿಂದ ಆಶ್ರಿತರ ಪರಿತಾಪವನ್ನು ಹೋಗಲಾಡಿಸುತ್ತದೆ."

स्वसुखनिरभिलाषः ತನ್ನ ಸುಖದಲ್ಲೇ ಅಭಿಲಾಷೆ ಇಲ್ಲದೆ, स्वस्य सुखं स्वसुखं, निर्गतः अभिलाषः यस्मात् सः निरभिलाषः, स्वसुखे निरभिलाषः । हेतोः ಅದಕ್ಕೋಸ್ಕರ (ಪಾ. षष्ठी हेतुप्रयोगे).

प्रतिदिनं—दिने दिने प्रतिदिनं—ಅವ್ಯಯೀಭಾವಸಮಾಸ. ರಾಜನನ್ನು ಅವನ ಸ್ವಾರ್ಥರಹಿತ ಸೇವೆಗೋಸ್ಕರ ಇಲ್ಲಿ ಪ್ರಶಂಸಿಸಲಾಗಿದೆ. अलिन्दः ಎತ್ತರವಾದ ಅಂಗಳ.

(ಪುಟ 50)

ಪದ್ಯ—6 (ಅನ್ವಯ) महाभागः अभिन्नस्थितिः असौ नरपतिः वर्णानाम् अपकृष्टः अपि कश्चित् अपथं न भजते, (इति) कामम्। तथा अपि शश्वत परिचितविविक्तेन मनसा इदं जनाकीर्णं हुतवहपरीतं गृहं इव मन्ये ॥

'ಮಹಾತ್ಮನಾದ ಈ ರಾಜ ಧರ್ಮಚ್ಯುತನಲ್ಲವೆಂಬುದನ್ನೂ, ಚತುರ್ವರ್ಣ ಗಳಲ್ಲಿ ಯಾರೂ-ಕೇವಲ ಅಧಮನೂ, ಕುಮಾರ್ಗವನ್ನು ಅವಲಂಬಿಸುವುದಿಲ್ಲ ವೆಂಬುದನ್ನೂ ಒಪ್ಪೋಣ. ಆದರೂ ಸದಾ ನಿರ್ಜನತೆಗೆ ಒಗ್ಗಿದ ಮನಸ್ಸಿನಿಂದ ಕೂಡಿ ಜನನಿಬಿಡವಾದ ಇದನ್ನು (ಅರಮನೆಯನ್ನು) ಜ್ವಾಲೆಯಿಂದ ಸುತ್ತು ವರಿಯಲ್ಪಟ್ಟ ಗೃಹವೆಂದು ಭಾವಿಸುತ್ತೇನೆ.'

महाभागः ಮಹಾತ್ಮನಾದ, ಶ್ರೇಷ್ಠನಾದ, महान् भागः भाग्यं यस्य सः

वर्णानां....कश्चित् ಚತುರ್ವರ್ಣಗಳಲ್ಲಿ, ಹೀನನಾಗಿರತಕ್ಕವನೂ

अपथं ದುರ್ಮಾರ್ಗವನ್ನು ಕುಮಾರ್ಗವನ್ನು; पथिन् ಸಮಾಸಾಂತದಲ್ಲಿ पथ ಎಂದಾಗುತ್ತದೆ: ಪಾ. ऋक्पूरब्धूः पथामानक्षे ; ಆದರೆ ತತ್ಪುರುಷ ಸಮಾಸದಲ್ಲಿ ನಿಷೇಧಾರ್ಥಕ न ಪೂರ್ವಕವಾಗಿದ್ದಲ್ಲಿ. ಪಾ. पथो विभाषा ಎಂಬ ಸೂತ್ರದ ಪ್ರಕಾರ ಮೇಲ್ಕಂಡ ವ್ಯತ್ಯಾಸ ವಿಕಲ್ಪವಾಗುತ್ತದೆ ; ಆ ವ್ಯತ್ಯಾಸ ಬಂದಾಗ ಅಂಥ ಸಮಾಸಪದ ನಪುಂಸಕ ಲಿಂಗದಲ್ಲಿರುತ್ತದೆ—ಪಾ. अपथं नपुंसकम् (II. 4. 30.). ರಾಜನ, ಅವನ ರಾಜ್ಯದ ವೈಶಿಷ್ಟ್ಯ ಏನೇ ಇರಲಿ, ಶಾರ್ಙ್ಗರವನಿಗೆ ಮಾತ್ರ ಜನಾಕೀರ್ಣವಾದ ಅರಮನೆ ಜುಗುಪ್ಸೆಯುಂಟು ಮಾಡುವುದಲ್ಲದೆ, ಬೆಂಕಿ ಬಿದ್ದ ಗೃಹದಂತಿದೆ.

ಪದ್ಯ—7 (ಅನ್ವಯ) इह सुखसङ्गिनं जनं स्नातः अभ्यक्तम् इव, शुचिः अशुचिम् इव प्रबुद्धः सुप्तम् इव, स्वैरगतिः बद्धम् इव अवैमि ॥

'ಸುಖಲೋಲುಪರಾದ ಈ ಜನರನ್ನು ನಾನು—ಸ್ನಾನಮಾಡಿದವನು ಎಣ್ಣೆಯೊತ್ತಿಕೊಂಡಿರುವವನನ್ನೂ ಶುದ್ಧನು ಅಶುದ್ಧನನ್ನೂ, ಎಚ್ಚೆತ್ತವನು ಸುಪ್ತನನ್ನೂ, ಚಲನಸ್ವಾತಂತ್ರ್ಯವುಳ್ಳವನು ಬಂಧಿತನನ್ನೂ ನೋಡುವಂತೆ ನೋಡುತ್ತಿದ್ದೇನೆ.

ಅರಮನೆಗೆ ಬಂದ ಶಾರದ್ವತನೂ ಶಾರ್ಙ್ಗರವನಂತೆ ಬೇಸರದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಅಲ್ಲಿನ ಜನರ ಸುಖಾಸಕ್ತಿ ಅವರ ಬಗ್ಗೆ ಅವನಲ್ಲಿ ಮರುಕ ವನ್ನುಂಟುಮಾಡುತ್ತದೆ.

वामेतरं....विस्फुरति ನನ್ನ ಬಲಗಣ್ಣು ಮಿಡಿಯುವುದೇಕೆ ? ಬಲಗಣ್ಣಿನ ಮಿಡಿತ ಸ್ತ್ರೀಯರಿಗೆ ಅಶುಭವೆಂದೂ, ಪುರುಷರಿಗೆ ಶುಭವೆಂದೂ, ಹಾಗೆಯೇ ಎಡಗಣ್ಣಿನದು ಸ್ತ್ರೀಯರಿಗೆ ಶುಭವೆಂದೂ ಪುರುಷರಿಗೆ ಅಶುಭವೆಂದೂ ನಂಬಿಕೆ.

प्रतिहतममङ्गलम् ಅಶುಭ ತೊಲಗಲಿ.

मुक्तासनः ಆಸನವನ್ನು ಬಿಟ್ಟಿದ್ದು ; मुक्तं आसनं येन सः । वयमत्र मध्यस्थाः ಈ ವಿಚಾರದಲ್ಲಿ ನಾವು ಉದಾಸೀನರು. ರಾಜಪುರೋಹಿತ ರಾಜನನ್ನು ವರ್ಣಾಶ್ರಮಗಳ ರಕ್ಷಕ ಎಂದು ಮುಂತಾಗಿ ವರ್ಣಿಸುತ್ತಾನೆ; ಆ ಮಾತುಗಳು ರಾಜಾನುಗ್ರಹ ಸೂಚಕವೆಂಬಂತೆ ಇದ್ದುದನ್ನು ತಿಳಿದ ಶಾರ್ಙ್ಗರವ ಆದರಿಂದ ಸ್ವಲ್ಪ ಚುಚ್ಚಲ್ಪಟ್ಟು ತಾನು ಆ ಅಭಿನಂದನೀಯ ವಿಚಾರದಲ್ಲಿ ಉದಾಸೀನನಾಗಿರುವುದಾಗಿ ಹೇಳುತ್ತಾನೆ.

ಪದ್ಯ—8 (ಅನ್ವಯ) तरवः फलागमैः नम्राः भवन्ति । घनाः नवाम्बुभिः दूरविलम्बिनः सत्पुरुषा समृद्धिभिः अनुद्धताः । परोपकरिणाम् एषः स्वभावः एव ॥

'ತರುಗಳು—ಫಲಪ್ರಾಪ್ತಿಯಿಂದ ಬಾಗುತ್ತವೆ ; ಹೊಸನೀರಿನಿಂದ ಕೂಡಿ ಮೇಘಗಳು ಬಹುದೂರ ಕೆಳಕ್ಕೆ ಚಾಚುತ್ತವೆ ; ಸತ್ಪುರುಷರು ಸಂಪತ್ತುಗಳಿಂದ ಉಬ್ಬುವುದಿಲ್ಲ (ತಗ್ಗಿರುತ್ತಾರೆ) ; ನಿಜಕ್ಕೂ ಇದು ಪರೋಪಕಾರಿಗಳೆಲ್ಲರ ಸ್ವಭಾವವೇ ಸರಿ.'

दूरविलम्बिनः ಕೆಳಗಿನವರೆಗೂ ಚಾಚಿರುವ.
अनुद्धताः ಉಬ್ಬದ. ಈ ಶ್ಲೋಕ ಭರ್ತೃಹರಿಯ ನೀತಿಶತಕದಲ್ಲೂ ಕಂಡುಬರುತ್ತದೆ.
प्रसन्नमुखवर्णाः ಹರ್ಷಗೊಂಡ ಮುಖಚರ್ಯೆಯುಳ್ಳವರಾಗಿ.

ಪದ್ಯ—9 (ಅನ್ವಯ) पाण्डुपत्राणां (मध्ये) किसलयम् इव, तपोधनानां मध्ये अवगुण्ठनवती न अतिपरिस्फुटलावण्या, का स्वित् ? ॥

'ಹಣ್ಣೆಲೆಗಳ ಮಧ್ಯೆ ಚಿಗುರಿನಂತೆ, ತಾಪಸರ ಮಧ್ಯೆ ಸ್ಫುಟವಾಗಿ ಕಾಣದ ಸೌಂದರ್ಯವುಳ್ಳ ಈ ಅವಗುಂಠನವತಿ ಮುಸುಕನ್ನು (ಹಾಕಿಕೊಂಡಿರುವವಳು) ಯಾರಿರಬಹುದು ? '

अवगुण्ठनवती, अवगुण्ठनं (ಮುಸುಕು) अस्याः अस्ति इति
कास्वित् ? ಯಾರಿರಬಹುದು ? स्वित् ಪ್ರಶ್ನೆ ಅಥವಾ ಸಂಶಯ ಸೂಚಕ.
कुतूहलगर्भः ಕುತೂಹಲದಿಂದ ತುಂಬಿ, कुतूहलं गर्भे यस्य सः
अनि....कलत्रम् ಪರಭಾರ್ಯೆಯನ್ನು ದೃಷ್ಟಿಸಿ ನೋಡಬಾರದು ; ರಾಜನ ಸಚ್ಚಾರಿತ್ರ್ಯಕ್ಕೆ ಇದೊಂದು ಒಳ್ಳೆಯ ನಿದರ್ಶನ.

(ಪುಟ 51)

युज्यस्व ಹೊಂದು, ಪಡೆ, √युज् 4 ಆತ್ಮನೇ, ಮಧ್ಯಮ, ಪು. ಏ.
अपि निर्विघ्न....ಇಲ್ಲಿ अपि ಪ್ರಶ್ನಾರ್ಥಕ

ಪದ್ಯ—10 (ಅನ್ವಯ) त्वयि रक्षितरि सतां धर्मक्रियाविघ्नः कुतः। घर्मांशौ तपति सति तमः कथं आविर्भविष्यति ॥

'ನೀನು ರಕ್ಷಕನಾಗಿರುವಾಗ ಸತ್ಪುರುಷರ ಧರ್ಮಕ್ರಿಯೆಗಳಿಗೆ ಎಲ್ಲಿಂದ ತಾನೆ ವಿಘ್ನ ಉಂಟಾದೀತು ? ಸೂರ್ಯ ಪ್ರಕಾಶಿಸುತ್ತಿರುವಲ್ಲಿ ಕತ್ತಲು ಕಾಣಿಸಿಕೊಳ್ಳುವ ಬಗೆ ಹೇಗೆ ?

धर्मक्रिया....कुतः ಧಾರ್ಮಿಕಕ್ರಿಯೆಗಳಿಗೆ ಭಂಗ ಎಲ್ಲಿಂದ ಬಂದೀತು ? घर्मांशौ ಸೂರ್ಯ, घर्माः अंशवः यस्य, तस्मिन्, घर्मांशौ...सति ಸೂರ್ಯ ಪ್ರಕಾಶಿಸುತ್ತಿರುವಾಗ. कुशली—कुशलं अस्यास्तीति. स्वाधीन....मन्तः ಸಿದ್ಧಿಯುಳ್ಳವರ ಯೋಗಕ್ಷೇಮ ಅವರ ಸ್ವಾಧೀನವಾಗಿರುತ್ತದೆ, स्वाधीनं कुशलं येषां ते, सिद्धयः एषां सन्ति इति सिद्धिमन्तः। अनामय....पूर्वकं ಆರೋಗ್ಯವನ್ನು ಕುರಿತ ಪ್ರಶ್ನಪೂರ್ವಕವಾಗಿ आमयस्य अभावः; ಹೋಲಿಸಿ ब्राह्मणं कुशलं पृच्छेत्क्षत्रबन्धुमनामयम्। वैश्यं क्षेमं समागम्य शूद्रमारोग्यमेव च ॥—ಮನುಸ್ಮೃತಿ II. 127.

उपायंस्त—उप+√यम् ಇದರ लुङ् ಪ್ರ. ಪು. ಏಕ–यम् ಧಾತುವು ಪರಸ್ಮೈಪದ, ಆದರೆ ವಿವಾಹವಾಗು ಎಂಬ ಅರ್ಥದಲ್ಲಿ उप ಪೂರ್ವಕವಾಗಿದ್ದಲ್ಲಿ ಆತ್ಮನೇಪದ ವಾಗುತ್ತದೆ. ಪಾ. उपाद्यमः स्वकरणे.

ಪದ್ಯ—11 (ಅನ್ವಯ) त्वम् अर्हतां प्राग्रसरः (इति) नः स्मृतः असि। शकुन्तला च मूर्तिमती सत्क्रिया। तुल्यगुणं वधूवरं समानयन् चिरस्य वाच्यं न गतः ॥

'ನೀನು ಶ್ರೇಷ್ಠರಲ್ಲಿ ಅಗ್ರೇಸರನೆಂದು ನಮಗೆ ತಿಳಿದವನಾಗಿದ್ದೀಯೆ; ಶಕುಂತಲೆ ಯಾದರೋ ಸತ್ಕ್ರಿಯೆಗಳ ಮೂರ್ತರೂಪಳು. ಸಮಾನಗುಣವುಳ್ಳ ವಧೂವರರನ್ನು ಒಂದುಗೂಡಿಸಿ ಬಹುಕಾಲಾನಂತರ ಬ್ರಹ್ಮ ನಿಂದ್ಯನಾಗಲಿಲ್ಲ.'

तुल्यगुणं ಸಮಾನ ಗುಣವುಳ್ಳ.

वधूवरम् वधूश्च, वरश्च तयोः समाहारः तं—ಸಮಾಹಾರದ್ವಂದ್ವ. ಉದ್ದಕ್ಕೂ ಬ್ರಹ್ಮ ಅಸಮಾನರನ್ನೇ ವಿವಾಹದಲ್ಲಿ ಒಂದುಗೂಡಿಸುತ್ತಾ ಬಂದು, ಈಗ ಬಹು ಕಾಲವಾದ ಮೇಲೆ ಸಮಾನ ಗುಣವುಳ್ಳ ವಧೂವರರನ್ನು (ಶಕುಂತಲಾ ದುಷ್ಯಂತರನ್ನು) ಸತಿಪತಿಗಳನ್ನಾಗಿ ಮಾಡಿ ಅಂತಹ ನಿಂದೆಯನ್ನು ತಪ್ಪಿಸಿ ಕೊಂಡಿದ್ದಾನೆ.

सहधर्मचरणाय—ಒಟ್ಟಿಗೆ ಧರ್ಮವನ್ನಾಚರಿಸುವುದಕ್ಕಾಗಿ ; ಹಿಂದೂ ಧರ್ಮದ ಪ್ರಕಾರ ವಿವಾಹದ ಮುಖ್ಯಗುರಿಯೆಂದರೆ, ಸತಿಪತಿಯರು ಒಟ್ಟಾಗಿ ಧರ್ಮವನ್ನಾಚರಿಸತಕ್ಕದ್ದು.

(ಪುಟ 52)

ಪದ್ಯ—12 (ಅನ್ವಯ) अनया गुरुजनः न अपेक्षितः त्वया बन्धुजनः न पृष्टः एकैकं चरिते एकैकं किं भणामि ॥

'ಅವಳು ಗುರುಹಿರಿಯರನ್ನಪೇಕ್ಷಿಸಲಿಲ್ಲ ; ನೀನು ಬಂಧುಗಳನ್ನು ಕೇಳಲಿಲ್ಲ. ನೀವು ನೀವೇ ನಡೆಸಿದ ವ್ಯವಹಾರದಲ್ಲಿ ಒಬ್ಬೊಬ್ಬರನ್ನು ಕುರಿತು ನಾನು ಏನು ಹೇಳಲಿ ?'

ಈ ರಹಸ್ಯಪ್ರಣಯ ವ್ಯವಹಾರದಲ್ಲಿ ದುಷ್ಯಂತ ಶಕುಂತಲೆಯರ–ವಿಶೇಷವಾಗಿ ದುಷ್ಯಂತನ ಜವಾಬ್ದಾರಿಯನ್ನೂ, ಈಗ ಆ ವ್ಯವಹಾರವನ್ನು ದುಷ್ಯಂತ ಗೌರವಿಸುವ ಆವಶ್ಯಕತೆಯನ್ನೂ ಗೌತಮಿಯು ಸೂಚಿಸುತ್ತಾಳೆ.

किं....भणति ಶಕುಂತಲೆಯ ಕಾತರತೆ ಇದರಿಂದ ತಿಳಿದು ಬರುತ್ತದೆ ; किमिद-मुपन्यस्तम् ಇವೆಲ್ಲ ಏನು ಮಾತುಗಳು ! ಎಂಬುದಾಗಿ ದುಷ್ಯಂತ ವ್ಯಕ್ತಪಡಿಸಿದ ಪ್ರತಿಕ್ರಿಯೆ ಅವಳಿಗೆ ಪಾವಕ ಸಮಾನವಾಗಿದೆ. ಮುಂದೆ ದುಷ್ಯಂತ ಮತ್ತು ಶಕುಂತಲೆ ತಾಪಸರು ಇವರ ನಡುವೆ ತೀಕ್ಷ್ಣ ರೀತಿಯ ವಾಗ್ವಾದ ನಡೆಯುತ್ತದೆ.

ಪದ್ಯ—13 (ಅನ್ವಯ) ज्ञातिकुलैकसंश्रयां भर्तृमतीं सतीम् अपि जनः अन्यथा विशङ्कते । अतः स्वबन्धुभिः प्रमदा प्रिया अप्रिया वा परिणेतुः समीपे इष्यते ॥

'ಬಂಧುಕುಲವನ್ನೇ ಆಶ್ರಯಿಸಿಕೊಂಡಿರುವ ವಿವಾಹಿತಳಾದ ಸಾಧ್ವೀಮಣಿಯನ್ನು ಜನ ಅನ್ಯಥಾ ಭಾವಿಸುತ್ತಾರೆ. ಆದ್ದರಿಂದ ಅಂತಹ ಪ್ರಮದೆ ಪತಿಯ ಸಮೀಪದಲ್ಲಿ—ಪ್ರಿಯಳಾಗಿರಲಿ ಅಪ್ರಿಯಳಾಗಿರಲಿ–ಇರಬೇಕೆಂಬುದನ್ನು ಬಂಧುಗಳು ಇಚ್ಛಿಸುತ್ತಾರೆ :

ज्ञाति....संश्रयां ಕೇವಲ ಬಂಧುಗಳ ಜೊತೆಯಲ್ಲಿ ವಾಸಿಸುವ, ज्ञातिकुलं एकः संश्रयः यस्याः सा, तां. ಸಾಧ್ವಿಯನ್ನು, ಪತಿವ್ರತೆಯನ್ನು.

प्रिया अप्रिया वा ಪ್ರೀತಿಪಾತ್ರಳಾಗಲಿ, ಆಗದಿರಲಿ ; ವಿವಾಹಿತಳಿಗೆ ಸೂಕ್ತವಾದ ಸ್ಥಾನ ಪತಿಗೃಹಮಾತ್ರವೆಂಬುದು ಶಾರ್ಙ್ಗರವನ ಅಭಿಪ್ರಾಯ.

किमत्र....पूर्वा ? ಅವಳನ್ನು ನಾನು ವಿವಾಹಮಾಡಿಕೊಂಡಿದ್ದೇನೇನು ? पूर्वं परिणीता परिणीतपूर्वा—ಈ ಪ್ರಶ್ನೆಯಿಂದ ಶಕುಂತಲೆಯ ಸಂಶಯ ಭೀತಿಗಳು ಇನ್ನೂ ದೃಢಪಡುತ್ತವೆ.

ಪದ್ಯ — 14 (ಅನ್ವಯ) किं कृतकार्यद्वेषः, धर्मं प्रति विमुखता, कृतावज्ञा ? अमी विकाराः प्रायेण ऐश्वर्यमत्तेषु मूर्च्छन्ति ॥

'ಇದೇನು ಮಾಡಿದ ಕಾರ್ಯದ ಮೇಲಣ ದ್ವೇಷವೋ, ಧರ್ಮ ಪರಾಙ್ಮುಖತೆಯೋ ಅಂಗೀಕೃತವಾದುದರ ಬಗ್ಗೆ ತಿರಸ್ಕಾರವೋ ? ಇಂತಹ ವಿಕಾರಗಳು ವಿಶೇಷವಾಗಿ ಧನದಿಂದ ಮದಿಸಿದವರಲ್ಲಿ ವಿಜೃಂಭಿಸುತ್ತವೆ.'

कृत....द्वेषः, कृते कार्ये द्वेषः ।

कृतावज्ञा–कृतायाः अङ्गीकृतायाः अवज्ञा (ತಿರಸ್ಕಾರ)

असत्....प्रश्नः ಕಲ್ಪಿತ ಅಸತ್ಯದ ಆಧಾರವುಳ್ಳ ಪ್ರಶ್ನೆ, असतः अविद्यमानार्थस्य कल्पना, तया कृतः प्रश्नः । मूर्च्छन्ति ಅಧಿಕಗೊಳ್ಳುತ್ತವೆ.

अधिक्षिप्तोऽस्मि ನಿಂದಿತನಾಗಿದ್ದೇನೆ.

ಪದ್ಯ — 15 (ಅನ್ವಯ) एवम् उपनतम् इदं अक्लिष्टकान्ति रूपं प्रथमपरिगृहीतं स्यात् न वा इति अध्यवस्यन् खलु, भ्रमरः विभाते अन्तस्तुषारं कुन्दं इव परिभोक्तुं न च शक्नोमि, हातुं न एव शक्नोमि ॥

'ಹೀಗೆ ಉಪಸ್ಥಿತವಾಗಿರುವ ಈ ಅನವದ್ಯ ರೂಪು ನನ್ನಿಂದ ಮೊದಲು ಸ್ವೀಕೃತವಾಗಿತ್ತೋ ಇಲ್ಲವೋ ಎಂಬುದನ್ನು ನಿರ್ಧರಿಸಲಶಕ್ತನಾಗಿ, ಮುಂಜಾನೆಯಲ್ಲಿ ಭ್ರಮರವೊಂದು ಮಂಜಿನ ಹನಿಯುಳ್ಳ ಕುಂದಪುಷ್ಪದ ವಿಚಾರದಲ್ಲಿ ಮಾಡುವಂತೆ, ಅದನ್ನು (ಆ ರೂಪನ್ನು) ಅನುಭವಿಸಲಾರೆ ಅಥವಾ ಬಿಡಲಾರೆ.'

अक्लिष्टकान्ति—अक्लिष्टा कान्तिः यस्य तत्.

अध्यवस्यन् ನಿರ್ಧರಿಸಲಾರದೆ ಇರುತ್ತಾ.

अन्तस्तुषारं कुन्दं. ಒಳಗೆ ಮಂಜಿನಹನಿಯಿರುವ ಕುಂದಪುಷ್ಪ (ಮಲ್ಲಿಗೆ), अन्तस्तुषारः यस्मिन् तत् कुन्दं ದುಷ್ಯಂತ ತೀವ್ರಸಂಶಯಕ್ಕೀಡಾಗಿರುವ ವಿಚಾರವು ಭ್ರಮರಸನ್ನಿವೇಶದ ಹೋಲಿಕೆಯಿಂದ ಅತಿ ಪರಿಣಾಮಕಾರಿಯಾಗಿರುವಂತೆ ಪ್ರತಿಪಾದಿತವಾಗಿದೆ.

(ಪುಟ 53)

अहो, धर्मापेक्षिता भर्तुः ಪ್ರಭುವಿನದು ಎಂತಹ ಧರ್ಮಶ್ರದ್ಧೆ ! ದುಷ್ಯಂತನ ಸಚ್ಚಾರಿತ್ರ್ಯಕ್ಕೆ ಇದೊಂದು ಮೆಚ್ಚುಗೆ.

जोषं ಮೌನವಾಗಿ (ಕ್ರಿ.ವಿ.)

क्षेत्रिणं ನ್ಯಾಯಸಮ್ಮತ ಪತಿಯೆಂದು

कुतः....आशा ಎಲ್ಲಿ, ಏರುತ್ತಿದ್ದ, (ಜಿಗಿಯುತ್ತಿದ್ದ) ಆ ಆಶೆ! ಶಕುಂತಲೆಯ ನಿರಾಶೆ ಕ್ರಮೇಣ ತೀವ್ರಗೊಳ್ಳುತ್ತಿದೆ.

ಪದ್ಯ—17 (ಅನ್ವಯ) कृताभिमर्शां सुताम् अनुमन्यमानः मुनिः त्वया विमान्यः, येन मृष्टं स्वम् अर्थं प्रतिग्राहयता दस्युः इव पात्रीकृतः असि ॥

'ನಿನ್ನಿಂದ ಅಪಚಾರಕ್ಕೊಳಗಾದ ಪುತ್ರಿಯನ್ನು ಅಂಗೀಕರಿಸಿದ ಮತ್ತು ಕಳ್ಳನಿಗೆ ಹೇಗೋ ಹಾಗೆ ನಿನಗೆ ಅಪಹೃತ ವಸ್ತುವನ್ನು ಹಿಂದಕ್ಕೆ ಕೊಟ್ಟು ನಿನ್ನನ್ನು ಸತ್ಪಾತ್ರವಾಗಿಸಿದ ಆ ಮುನಿ ನಿಂದಾರ್ಹ !'

ಅನ್ಯಾಯಕ್ಕೆ ವಿರುದ್ಧವಾಗಿ ಶಾರ್ಙ್ಗರವನ ಕೋಪ ಇಲ್ಲಿ ಉಗ್ರವಾಗಿದೆ.

कृताभिमर्शाम् ಅಪಚಾರಕ್ಕೊಳಗಾದ कृता अभिमर्शा यस्याः सा, ताम्. ಸತ್ಪುರುಷನೊಬ್ಬನಿಂದ ಒಂದು ವಸ್ತುವನ್ನು ಅಪಹರಿಸಿ ಅಲ್ಲೇ ಬಿಟ್ಟು ಹೋಗಿದ್ದ ಕಳ್ಳನಿಗೆ ಅವನನ್ನೇ ಸತ್ಪಾತ್ರವಾಗಿಸಿ ಆ ಸತ್ಪುರುಷ ಅದನ್ನು ಹಿಂತಿರುಗಿ ಕೊಡುವ ಸನ್ನಿವೇಶಕ್ಕೆ ಕಾಶ್ಯಪಮುನಿಯ ಔದಾರ್ಯವನ್ನು ಹೋಲಿಸಿದೆ.

विरम—ಧಾತು रम्, ಇದು ಆತ್ಮನೇಪದ ; ಆದರೆ वि, आ ಅಥವಾ परि ಪೂರ್ವಕ ವಾಗಿದ್ದರೆ ಪರಸ್ಮೈಪದವಾಗುತ್ತದೆ. ಪಾ. व्याङ्परिभ्यो रमः ।

प्रत्ययप्रतिवचनम् ನಂಬಿಕೆಯನ್ನು ಹುಟ್ಟಿಸುವ ಉತ್ತರ.

समुदाचारः ಸಂಬೋಧನೆಯ ಸತ್ಸಂಪ್ರದಾಯ.

स्वभावोत्तानहृदयम् ಸ್ವಭಾವತಃ ತೆರೆದ ಹೃದಯವುಳ್ಳ, ಮುಗ್ಧವಾಗಿರುವ, स्वभावतः उत्तानं हृदयं यस्य तम्. समयपूर्वं ಒಪ್ಪಂದಪೂರ್ವಕವಾಗಿ

प्रत्याख्यातुं ತ್ಯಜಿಸಲು, ನಿರಾಕರಿಸಲು,

ಪದ್ಯ—17 (ಅನ್ವಯ) कूलङ्कषा सिन्धुः इव प्रसन्नम् अम्भः तटतरुं च व्यपदेशम् आविलयितुम् इमं जनं च पातयितुं किम् ईहसे॥

'ತೀರವನ್ನು ಕೊಚ್ಚುವ ಪ್ರವಾಹವು ತಿಳಿನೀರು ಮತ್ತು ತೀರವೃಕ್ಷ ಇವುಗಳ ವಿಚಾರದಲ್ಲಿ ಮಾಡುವಂತೆ ನೀನು ನಮ್ಮ ಕುಲಗೌರವವನ್ನೂ ನಮ್ಮನ್ನೂ ಅಧೋಗತಿಗೆ ತರಲು ಇಚ್ಛಿಸುವಿಯೇಕೆ ?'

कूलङ्कषा ತೀರವನ್ನು ಕೊಚ್ಚುವ, कूलं कषति इति– ಪಾ. सर्वकूलाभ्रकरीषेषु कषः ವಾರ್ತಿಕ, अरुर्द्विषदजन्तस्य मुम् ।

पातयितुं ಬೀಳಿಸಲು, ಅಧೋಗತಿಗೆ ತರಲು

अभिज्ञानं ಸ್ಮರಣಾರ್ಥಕ ವಸ್ತು. ದುಷ್ಯಂತ ತನಗೆ ಸ್ಮರಣಾರ್ಥಕವಾಗಿ ಕೊಟ್ಟಿದ್ದ ಉಂಗುರವನ್ನು ತೋರಿಸಿ ಅವನ ಮನವೊಪ್ಪಿಸಬೇಕೆಂದು ಶಕುಂತಲೆಯ ಅಪೇಕ್ಷೆ.

उदारः कल्पः ಸೂಕ್ತವಾದ ಅಭಿಪ್ರಾಯವೇ ಸರಿ.

(ಪುಟ 54)

शक्रावताराभ्यन्तरे ಶಕ್ರಾವತಾರವೆಂಬ ಹೆಸರುಳ್ಳ ಸ್ನಾನಘಟ್ಟ ಮತ್ತು ಅಲ್ಲಿನ शचीतीर्थ ವಸ್ತುರಚನೆಯ ಮತ್ತು ನಾಟಕ 'ಕಾರ್ಯ' ಪ್ರಗತಿಯ ದೃಷ್ಟಿಯಿಂದ ಉಂಗುರ ಕಾಣೆಯಾಗಿರುವ ಈ ಪ್ರಸಂಗ ಅತಿ ಪರಿಣಾಮಕಾರಿಯಾದುದು.

प्रत्युत्पन्नमति ಸಿದ್ಧವಾದ ಬುದ್ಧಿಯುಳ್ಳ, प्रत्युत्पन्ना मतिः यस्य तत्. स्त्रैणं ಸ್ತ್ರೀ ಸಮೂಹ स्त्रीणां समूहः, ನೋಡಿ, ಪಾ. स्त्रीपुंसाभ्यां नञ्स्नञौ भवनात्

श्रोतव्यम् ಕೇಳಲ್ಪಡಬೇಕಾದುದು—ರಾಜ ವ್ಯಂಗವಾಗಿ ಮಾತಾಡುತ್ತಾನೆ.

नलिनी…भाजन ಕಮಲಪತ್ರಗಳ ಪಾತ್ರೆ.

पुत्रकृतक: ಸಾಕುಮಗ, कृतकश्चासौ पुत्रश्च.

उपच्छन्दित: ಪುಸಲಾಯಿಸಲ್ಪಟ್ಟ.

इत्थं प्रहसितोऽसि ನೀನು ಹೀಗೆ ಹಾಸ್ಯಕ್ಕೆ ಹೇಳಿದೆ

सगन्धेषु ಒಂದೇ ಬಳಗದಲ್ಲಿ, ಸ್ವಬಾಂಧವರಲ್ಲಿ, समानः गन्धः येषां ते—ಶಕುಂತಲೆ, ಮರಿಜಿಂಕೆ ಇಬ್ಬರೂ ಕಾನನವಾಸಿಗಳು ; ಹಾಗೆ ಸಮಾನವಾದ ಆಶ್ರಯವಿದ್ದುದರಿಂದ ಜಿಂಕೆ ತನ್ನ ಬಳಗವಾದ ಶಕುಂತಲೆಯಲ್ಲಿ ವಿಶ್ವಾಸವನ್ನು ತೋರಿಸುತ್ತದೆಯೇ ಹೊರತು ಅಪರಿಚಿತ ರಾಜನಲ್ಲಲ್ಲ.

अनृत....मधुभिः ಸುಳ್ಳಿನಿಂದ ತುಂಬಿದ ಸಿಹಿ ಮಾತು, अनृतेन प्रचुरा अनृतमयी, अनृतमयीनां वाचां मधूनि तैः । विषयिणः ವಿಷಯಾಸಕ್ತ ಪುರುಷರು.

कैतवस्य अनभिज्ञः ಕುಟಿಲತೆಯನ್ನು ಅಥವಾ ಕಪಟವನ್ನರಿಯದ.

तापसवृद्धे ವೃದ್ಧಳಾಗಿರುವ ತಾಪಸಿಯೇ, वृद्धा चासौ तापसी च-वृद्धतापसी (ಅಥವಾ तापसवृद्धा, ಪಾ. कडारा: कर्मधारये ಎಂಬ ಸೂತ್ರದ ಪ್ರಕಾರ)

ಪದ್ಯ—18 (ಅನ್ವಯ) स्त्रीणाम् अशिक्षितपटुत्वम् अमानुषीषु संदृश्यते, याः प्रतिबोधवत्यः किमुत। परभृताः स्वम् अपत्यजातम् अन्तरिक्षगमनात् प्राक् अन्यैः द्विजैः पोषयन्ति खलु ॥

'ಮಾನುಷಿಯರಲ್ಲದ ಹೆಣ್ಣುಗಳಲ್ಲೂ ಬೋಧಿತವಲ್ಲದ ಒಂದು ಜಾಣ್ಮೆ ಕಂಡುಬರುತ್ತದೆ ; ಇನ್ನು ಮಾತೇ ಮುಂತಾದ ವ್ಯವಹಾರದಲ್ಲಿ ಕುಶಲೆಯರ ವಿಚಾರವೇನು! ಹೆಣ್ಣು ಕೋಗಿಲೆಗಳು ತಮ್ಮ ಸಂತತಿ ಹಾರಲು ಶಕ್ತವಾಗುವ ಮುನ್ನ ಅವು ಬೇರೆಯ ಪಕ್ಷಿಗಳಿಂದ ಪೋಷಿತವಾಗುವಂತೆ ಮಾಡುತ್ತವಷ್ಟೆ.'

ಹೋಲಿಸಿ—स्त्रियो हि नाम खल्वेता निसर्गादेव पण्डिताः ।
पुरुषणां तु पाण्डित्यं शास्त्रेणैवोपदिश्यते ॥

—ಮೃಚ್ಛಕಟಿಕಾ IV

अशिक्षितपटुत्वं ಬೋಧಿಸದಿದ್ದರೂ ಬಂದಿರುವ ಜಾಣ್ಮೆ, ಚಾತುರ್ಯ.

प्रतिबोधवत्यः ಮಾತು ಮುಂತಾದ ವ್ಯವಹಾರದಲ್ಲಿ ಕುಶಲೆಯರು, प्रतिबोधः आसाम् अस्ति इति ।

स्वम् अपत्यजातं ತಮ್ಮ ಸಂತತಿಯನ್ನು (ಕೋಗಿಲೆಗಳು ಕಾಗೆಗಳ ಸಂತತಿಯನ್ನು ಹೋಲುತ್ತವೆ). ಕಾಗೆಗಳಿಂದ ಮರಿ ಮಾಡಿಸಿ ಹಾರುವವರೆಗೂ ಪೋಷಿತ

ವಾಗುವಂತೆ ಮಾಡುವ ಜಾಣ ಕೋಗಿಲೆಯನ್ನು ಪರಭೃತ ಎಂದು ಕರೆದಿದ್ದಾರೆ. ದುಷ್ಯಂತ ಹೇಳುವಂತೆ ಸ್ತ್ರೀಯರ ಜಾಣ್ಮೆ, ಚಾತುರ್ಯ ಅಸಾಧಾರಣವಾದುದು. ಈ ಅಭಿಪ್ರಾಯವುಳ್ಳ ಅವನಿಗೆ ಮುಂದೆ ನಿಂತಿರುವ ಶಕುಂತಲೆ ಗೌತಮಿಯರು ತನ್ನನ್ನು ಉದ್ದೇಶಪೂರ್ವಕವಾಗಿ ವಂಚಿಸುತ್ತಿದ್ದಾರೆಂಬ ನಂಬಿಕೆ ದೃಢಪಟ್ಟಂತಿದೆ.

(ಪುಟ 55)

अनार्य ಅಧಮನೇ, ಘನತೆಗೆಟ್ಟವನೇ, ದುಷ್ಯಂತನಿಂದ ಸಂಪೂರ್ಣವಾಗಿ ಕೈಬಿಡಲ್ಪಟ್ಟಿರುವೆನೆಂಬ ಮನಗಾಣಿಕೆಯಿಂದ ಶಕುಂತಲೆ ಅಂತಹ ಅನ್ಯಾಯದ ವಿರುದ್ಧ ಕುಪಿತಳಾಗಿ ಅವನನ್ನು ಹೀಗೆ ಮೂದಲಿಸುತ್ತಾಳೆ.

आत्मनः हृदयानुमानेन ನಿನ್ನ ಹೃದಯದ ಸಂಶಯಕ್ಕನುಗುಣವಾಗಿ

धर्म....प्रवेशिनः ಧರ್ಮದ ಮೇಲು ಹೊದಿಕೆಯನ್ನು ಧರಿಸಿರುವ, धर्म एव कञ्चुकः, तं प्रविशति इति तथाभूतस्य. ಧರ್ಮದ ಸೋಗಿನಿಂದ.

तृणच्छन्नकूपोपमस्य ಹುಲ್ಲು ಶತ್ತೆಗಳಿಂದ ಮುಚ್ಚಿ ಹೋಗಿರುವ ಭಾವಿಯನ್ನು ಹೋಲುತ್ತಿದ್ದ.

तव....प्रतिपत्स्यते—ನಿನ್ನ ನಡತೆಯನ್ನನುಸರಿಸುತ್ತಾನೆ.

सन्दिग्धबुद्धिं कुर्वन्—ಸಂಶಯಗ್ರಸ್ತ ಬುದ್ಧಿಯುಳ್ಳವನನ್ನಾಗಿ ಮಾಡುತ್ತಾ.

अकैतवः—ಕಪಟರಹಿತ.

तथापि....न लक्षये—ಅಲ್ಲಿ ಇಂತಹುದನ್ನು ಕಾಣೆ—ತನ್ನ ಪ್ರಸಿದ್ಧವಾದ ಚರಿತೆಯಲ್ಲಿ ಶಕುಂತಲೆ ಮಾಡುವ ಆರೋಪಣೆಯಂತಹ ವಿಚಾರವನ್ನು ಕಾಣೆನೆಂದು ದುಷ್ಯಂತ ಹೇಳುತ್ತಾನೆ; ಶಕುಂತಲೆ ಕಪಟವನ್ನು ದುಷ್ಯಂತನ ಮೇಲೆ ಆರೋಪಿಸಿದಾಗ ಅವನು ಕೊಡುವ ಉತ್ತರ ಅದು.

स्वच्छन्दचारिणी ಸ್ವೇಚ್ಛಾಪ್ರವೃತ್ತಿಯುಳ್ಳವಳು, स्वस्य छन्दः तेन चरितुं शीलम् अस्याः इति.

सुखमधोः—ಬಾಯಲ್ಲಿ ಮಧು ಇರುವ, ಸಿಹಿ ಮಾತಿನ, मुखे मधु यस्य सः तस्य.

आत्मकृतं ಸ್ವಯಂಕೃತ.

चापलं—ಚಂಚಲ ಪ್ರವೃತ್ತಿ, ಆತುರದ ಕಾರ್ಯ.

ಪದ್ಯ—19 (ಅನ್ವಯ) अतः संगतं विशेषात् रहः परीक्ष्य कर्तव्यम्। अज्ञातहृदयेषु सौहृदम् एवं वैरीभवति ॥

'ಆದ್ದರಿಂದ ಒಂದು ಮೈತ್ರಿ ಯಾವುದು ರಹಸ್ಯದ್ದೋ ವಿಶೇಷವಾಗಿ ಅದು ಪರೀಕ್ಷೆಯ ಅನಂತರವೇ ಬೆಳಸಲು ತಕ್ಕದ್ದು; ಪರಸ್ಪರ ಹೃದಯಗಳನ್ನರಿಯದವರಲ್ಲಿ ಸೌಹಾರ್ದ ಹೀಗೆ ವೈರವಾಗುತ್ತದೆ.'

अज्ञातहृदयेषु — ಪರಸ್ಪರವಾಗಿ ಹೃದಯವನ್ನರಿಯದ ಪ್ರಣಯದ ವಿಚಾರದಲ್ಲಿ ಇದು ಎಚ್ಚರಿಕೆಯೂ ಹೌದು, ಉಪದೇಶವೂ ಹೌದು. अधरोत्तरम् ತಲೆ ಕೆಳಗಿನ ಪ್ರಸಂಗ. ಅನುಚಿತವಾದುದು.

ಪದ್ಯ—20 (ಅನ್ವಯ) यः आजन्मनः शाठ्यम् अशिक्षितः तस्य जनस्य वचनम् अप्रमाणम् । यैः परातिसन्धानं विद्या इति अधीयते ते आप्तवाचः सन्तु किल ॥

'ಕಪಟದಲ್ಲಿ ಯಾವ ಶಿಕ್ಷಣವೂ ಇಲ್ಲದ ಜನರ ಮಾತು ಪ್ರಮಾಣರಹಿತ. ಯಾರು ಪರವಂಚನೆಯನ್ನೇ ವಿದ್ಯೆ ಎಂದು ಅಭ್ಯಾಸ ಮಾಡಿರುತ್ತಾರೋ ಅವರೇ ಆಪ್ತವಾಚಕರಾಗಲಿ.'

परातिसन्धानम्—ಮೋಸ, ವಂಚನೆ, परेषां अतिसन्धानं.

ते किल—ಅವರೇ

आप्तवाचः आप्ताः वाचः येषां ते. ಶ್ಲೋಕದ ಮೊದಲನೆಯ ಪಂಕ್ತಿ ಶಕುಂತಲೆಗೂ, ಎರಡನೆಯದು ದುಷ್ಯಂತನಿಗೂ ಅನ್ವಯಿಸುತ್ತದೆ.

सत्यवादिन्—ಸತ್ಯವನ್ನು ನುಡಿಯುವವನೇ–ವ್ಯಂಗವಾಗಿ ಹೇಳಿದ ಮಾತು.

अतिसन्धाय—ಮೋಸಗೊಳಿಸಿ.

विनिपात—ಭ್ರಷ್ಟತೆ, ಅವನತಿ.

ಪದ್ಯ—21 (ಅನ್ವಯ) तत एषा भवतः कान्ता । एनां त्यज वा गृहाण वा । हि दारेषु प्रभुता सर्वतोमुखी उपपन्ना ॥

'ಅಂತು ಇವಳು ನಿನ್ನ ಪತ್ನಿ; ಇವಳನ್ನು ಸ್ವೀಕರಿಸು ಅಥವಾ ತ್ಯಜಿಸು. ಏಕೆಂದರೆ ಪತ್ನಿಯರ ಮೇಲಣ ಅಧಿಕಾರ ಸರ್ವತೋಮುಖವೆಂದು ಒಪ್ಪಲಾಗಿದೆ.'

सर्वतोमुखी — ಎಲ್ಲ ಮುಖವುಳ್ಳದ್ದು, ಎಲ್ಲ ಬಗೆಯದು–ದುಷ್ಯಂತನೊಡನೆ ಶಕುಂತಲೆ ಹೊಂದಿರುವ ಪತ್ನೀರೂಪದ ಸಂಬಂಧದ ವಿಚಾರದಲ್ಲಿ ಶಾರದ್ವತನಿಗೆ ಅತಿ ಗೌರವ. ಆದ್ದರಿಂದ ಅವನು "ಪತ್ನಿಯರ ಮೇಲಣ (ಪತಿಯ) ಅಧಿಕಾರ ಸರ್ವತೋಮುಖ" ಎಂದು ಘೋಷಿಸುತ್ತಾನೆ.

(ಪುಟ 56)

करुणपरिदेविनी—ಮನಕರಗುವಂತೆ ಪ್ರಲಾಪಿಸುತ್ತಿರುವ, करुणं परिदेवितुं शीलम् अस्याः ।

प्रत्यादेशपरुषे—ಪರಿತ್ಯಾಗದ ಕ್ರೌರ್ಯದಿಂದ ಕೂಡಿದ.

मे पुत्रिका — ಈ ನನ್ನ ಮಗು.

पुरोभागे—ಸ್ವೈರಿಣಿಯೇ

किं स्वातन्त्र्यमवलम्बसे—ಸ್ವಾತಂತ್ರ್ಯ ವಹಿಸುತ್ತೀಯೇನು ?—ಹೋಲಿಸಿ,

पिता रक्षति कौमारे भर्ता रक्षति यौवने ।
पुत्रो रक्षति वार्धक्ये न स्त्री स्वातन्त्र्यमर्हति ॥

—ಮನುಸ್ಮೃತಿ IX 3

ಪದ್ಯ—22 (ಅನ್ವಯ) यदि क्षितिपः यथा वदति तथा त्वम् असि, उत्कुलया त्वया पितुः किम्? अथ तु आत्मनः व्रतं शुचि वेत्सि, पतिकुले दास्यं अपि तव क्षमम्॥

'ರಾಜ ಹೇಳುವಂತೆ ನೀನು ಆಗಿರುವ ಪಕ್ಷದಲ್ಲಿ ಕುಲಚ್ಯುತಳಾದ ನಿನ್ನಿಂದ ಪಿತೃವಿಗೆ ಆಗಬೇಕಾದುದೇನು ? ಆದರೆ ನಿನ್ನ ವಿವಾಹವ್ರತವನ್ನು ಪರಿಶುದ್ಧವೆಂದು ತಿಳಿದಿರುವೆಯಾದರೆ ಪತಿಗೃಹದಲ್ಲಿ ದಾಸ್ಯವೂ ನಿನಗೆ ಸಮೀಚಿನವೇ ಸರಿ.'

उत्कुलया–ಕುಲಚ್ಯುತಳಾದವಳಿಂದ, उत्क्रान्ता कुलात् ಅಥವಾ उत्क्रान्तं कुलं यया सा. ವಿಷಯವನ್ನು ಶಾರ್ಙ್ಗರವ ಇತ್ಯರ್ಥಗೊಳಿಸುತ್ತಾನೆ; ಶಕುಂತಲೆ ಸ್ವೈರಿಣಿಯಾಗಿರಬಹುದು ಇಲ್ಲವೇ ದುಷ್ಯಂತನೊಡನೆ ಶುದ್ಧವಿವಾಹವಾಗಿರುವವಳಾಗಿರಬಹುದು. ಮೊದಲನೆಯ ಸಂದರ್ಭವಿದ್ದರೆ, ಅವಳು ಕುಲಕ್ಕೆ ತ್ಯಾಜ್ಯಳು; ಎರಡನೆಯದಾಗಿದ್ದರೆ ಅವಳು ದಾಸಿಯಾಗಿಯಾದರೂ ಪತಿಗೃಹದಲ್ಲಿ ಇದ್ದೇ ತೀರಬೇಕು.

ಪದ್ಯ—23 (ಅನ್ವಯ) शशाङ्कः कुमुदानि एव बोधयति, सविता पङ्कजानि एव। हि वशिनां वृत्तिः परपरिग्रहसंश्लेषपराङ्मुखी॥

'ಚಂದ್ರ, ಕುಮುದಗಳನ್ನೇ (ಬಿಳಿ ನೈದಿಲೆ) ಎಚ್ಚರಿಸುತ್ತಾನೆ (ಅರಳಿಸುತ್ತಾನೆ) : ಸೂರ್ಯನಾದರೋ ಕಮಲಗಳನ್ನು ಮಾತ್ರ. ಏಕೆಂದರೆ ಜಿತೇಂದ್ರಿಯರ ವರ್ತನೆ ಪರಭಾರ್ಯಾಸಂಪರ್ಕಕ್ಕೆ ವಿಮುಖವಾದುದು.'

पर....मुखी—परस्य परिग्रहः, परपरिग्रहस्य संश्लेषः, तस्मात् पराङ्मुखी।

अन्यसङ्गात्—ಅನ್ಯ ಸಹವಾಸದಿಂದ, अन्यस्याः सङ्गः, तस्मात्· गुरुलाघवं ಅಧಿಕ ಮತ್ತು ಅಲ್ಪ (ದೋಷ), गुरु च लाघवम् अनयोः समाहारः।

ಪದ್ಯ—24 (ಅನ್ವಯ) अहं मूढः स्याम्. एषा वा मिथ्या वदेत्, इति संशये दारत्यागी भवामि, आहो परस्त्रीस्पर्शपांसुलः॥

'ನಾನೇ ಭ್ರಾಂತನಾಗಿದ್ದೇನೆಯೋ, ಇವಳೇ ಸುಳ್ಳಾಡುತ್ತಿರುವಳೋ ಎಂಬ ಸಂಶಯದಲ್ಲಿ (ನಾನು) ಸ್ವಪತ್ನೀ ಪರಿತ್ಯಾಗ ಮಾಡಿದವನೋ ಪರಸ್ತ್ರೀಸ್ಪರ್ಶ ದೂಷಿತನೋ ಆಗಬಹುದು.'

आहो ಅಥವಾ. पर....पांसुलः ಪರಸ್ತ್ರೀಸ್ಪರ್ಶ ದೂಷಿತ परस्त्रियाः स्पर्शः तेन पांसुलः पांसवः (ಧೂಳು) सन्ति अस्य इति. ದುಷ್ಯಂತ ಸಂಶಯಕ್ಕೀಡಾಗಿ,

ಅದು ಈಗ ನಿರ್ದಿಷ್ಟರೂಪ ತಾಳಿದೆ. ತಾನೇ ಮೋಹಗೊಂಡಿರುವೆನೆಂಬ ಭಯ ಅವನಿಗೆ ; ಹಾಗಿದ್ದಲ್ಲಿ ಧರ್ಮಪತ್ನಿಯ ಪರಿತ್ಯಾಗದ ದುಷ್ಕ್ರಿಯೆ. ಅಲ್ಲದೆ ಶಕುಂತಲೆ ಮತ್ತು ಅವಳ ಸಂಗಡಿಗರ ಹೇಳಿಕೆಗಳ ಸತ್ಯತೆಯ ಬಗ್ಗೆ ಅವನಿಗೆ ಸಂಶಯ ; ಹೀಗಾಗಿ ಅವಳನ್ನು ಸ್ವೀಕರಿಸಿದರೆ ಪರಸ್ತ್ರೀಸ್ಪರ್ಶಪಾತಕದ ಸಂಭವ. ಈ ಎರಡು ಸಾಧ್ಯತೆಗಳು ಅವನನ್ನು ಅನಿರ್ಧಾರ ಕ್ಲೇಶಗಳಲ್ಲಿ ಸಿಕ್ಕಿಸಿವೆ.

आदिष्टपूर्वः—ಮೊದಲೇ ತಿಳಿಸಲ್ಪಟ್ಟವನು, पूर्वम् आदिष्टः । चक्रवर्तिनं ಚಕ್ರವರ್ತಿಯನ್ನು ; ಕೈಯಲ್ಲಿ ಚಕ್ರದ ಗುರುತುಳ್ಳವನ್ನು (ಬಲಗೈ ಗೆರೆಗಳು ಚಕ್ರದ ಆಕಾರದಲ್ಲಿರುವಿಕೆ.) ಭಾವಿ ಚಕ್ರವರ್ತಿ ಎಂಬ ನಂಬಿಕೆಗೆ ಅನ್ವಯಿಸುತ್ತದೆ.

मुनिदौहित्रः—ಮುನಿಯ ಮಗಳ ಮಗ, मुनिदुहितुः अपत्यं पुमान्.

(ಪುಟ 57)

विवरं ಪ್ರವೇಶದ್ವಾರ, ಇದು ರಾಮಾಯಣ ಕಥೆಯಲ್ಲಿನ ಸೀತೆಯ ಸ್ಥಿತಿಯನ್ನು ಸ್ಮರಣೆಗೆ ತಂದುಕೊಡುತ್ತದೆ. ಹೋಲಿಸಿ—तथा विश्वंभरे देवि मामन्तर्धातुमर्हसि—रघुवंश, XV. 81.

ಪದ್ಯ–25 (ಅನ್ವಯ) सा बाला स्वानि भाग्यानि निन्दन्ती बाहूत्क्षेपं क्रन्दितुं प्रवृत्ता च। स्त्रीसंस्थानम् एकं ज्योतिः आरात् एनाम् उत्क्षिप्य अप्सरस्तीर्थं जगाम च ॥

'ಆ ಬಾಲೆಯು ಬಾಹುಗಳನ್ನೆತ್ತಿ ತನ್ನ ದೈವವನ್ನು ನಿಂದಿಸುತ್ತಾ ಅಳಲಾರಂಭಿಸಿದಳು. ಸ್ತ್ರೀ ಆಕಾರದ ಜ್ಯೋತಿಯೊಂದು ಅವಳನ್ನು ದೂರದಿಂದಲೇ ಹಿಡಿದು ಅಪ್ಸರಸ್ತೀರ್ಥಕ್ಕೆ ಕೊಂಡುಹೋಯಿತು.'

बाहूत्क्षेपं—ಬಾಹುಗಳನ್ನು ಮೇಲೆತ್ತಿ, बाहू उत्क्षिप्य बाहूत्क्षेपं—णमुल् ಸೇರಿ ನಿಷ್ಪನ್ನವಾಗಿದೆ. ಪಾ. स्वाङ्गेऽध्रुवे ಎಂಬ ಸೂತ್ರದ ಪ್ರಕಾರ.

स्त्रीसंस्थानं—ಸ್ತ್ರೀ ಆಕಾರದ, ಸ್ತ್ರೀರೂಪದ, स्त्रियाः संस्थानम् इव संस्थानं यस्य तत्.

अप्सरस्तीर्थं—ಒಂದು ಸ್ನಾನಘಟ್ಟದ ಹೆಸರು ; ಪ್ರಾಯಃ ಅಪ್ಸರೆಯರೂ ಭೇಟಿ ಕೊಡುತ್ತಿದ್ದ ಸ್ಥಳ.

(ಪುಟ 58)

ಪದ್ಯ–26 (ಅನ್ವಯ) प्रत्यादिष्टां मुनेः तनयां परिग्रहं न स्मरामि (इति) कामम् । बलवत् दूयमानं हृदयं तु प्रत्याययति इव ॥

'ನಿರಾಕೃತಳಾದ ಮುನಿತನಯೆ ನನ್ನ ಕೈಹಿಡಿದವಳೆಂದು ಜ್ಞಾಪಕಕ್ಕೆ ಬಾರದ ವಿಷಯವೆಂದು ಒಪ್ಪೋಣ; ಆದರೂ ಪ್ರಕ್ಷುಬ್ಧವಾಗಿರುವ ಹೃದಯ ಅವಳನ್ನು ನಂಬುವಂತೆ ಪ್ರೇರಿಸುತ್ತದೆ.'

प्रत्यादिष्टां—ನಿರಾಕೃತಳಾದ. परिग्रहं ಕೈಹಿಡಿದವಳನ್ನಾಗಿ, ಪತ್ನಿಯನ್ನಾಗಿ, दूयमानं ಪ್ರಕ್ಷುಬ್ಧವಾದ, ಪೀಡಿತವಾಗಿರುವ.

प्रत्याययति—ನಂಬುವಂತೆ ಪ್ರೇರಿಸುತ್ತದೆ.

ಶಕುಂತಲೆಯನ್ನು ನಿರಾಕರಿಸಿದ ಮರುಕ್ಷಣದಲ್ಲಿ ಇದು ದುಷ್ಯಂತನ ಮಾನಸಿಕ ಸ್ಥಿತಿ. ಅವಳನ್ನು ವಿವಾಹವಾದುದನ್ನು ಜ್ಞಾಪಕಕ್ಕೆ ತಂದುಕೊಳ್ಳಲಾಗದಿದ್ದರೂ, ಹೃದಯ ಮಾತ್ರ ಅವಳನ್ನು ನಂಬುವಂತೆ ಒತ್ತಾಯಮಾಡುತ್ತದೆ. ನಿಜಕ್ಕೂ ಇದು ದುರ್ವಾಸ ಶಾಪದ ಫಲವೇ ಸರಿ. ಆದ್ದರಿಂದ ದುಷ್ಯಂತನಲ್ಲಿ ವಿಸ್ಮರಣವುಂಟಾಗಿದೆ; ಆದರೆ ಅದು ಸಂಪೂರ್ಣವಲ್ಲ. ಏಕೆಂದರೆ ಶಾಪ ಅವನ ಮನಸ್ಸಿನ ಮುಂದೆ ಗೋಡೆಯೊಂದನ್ನು ನಿರ್ಮಿಸದೆ ಅದರ ಮೇಲೆ ಒಂದು ತೆರೆಯನ್ನೆಳೆದಿದೆ. ಅಲ್ಲದೆ ಅವನಿಗೆ ಪ್ರತ್ಯಕ್ಷವಾಗಿ ಕಾಣುತ್ತಿರುವ ಮತ್ತು ಅವನಿಂದಲೇ ಉಂಟಾದುದೆಂದು ಹೇಳಿಸಿಕೊಂಡ ಶಕುಂತಲಾ ದುರವಸ್ಥೆಯೂ ಅಂತಹ ನಂಬಿಕೆಯನ್ನುಂಟು ಮಾಡುವುದರಲ್ಲಿ ಪಾತ್ರವಹಿಸಿದೆ. ಆದ್ದರಿಂದ ಅವನ ಸಾತ್ವಿಕ ಹೃದಯವು ಸರಿ ತಪ್ಪುಗಳ, ಪಾಪ ಪುಣ್ಯಗಳ ಹೊಯ್ದಾಟಕ್ಕೆ ಗುರಿಯಾಗದೆ, ಕ್ಲೇಶಗೊಳ್ಳದೆ ಇರಲು ಸಾಧ್ಯವಿಲ್ಲ. ಮುಂದಿನ ಅಂಕದ ವೃತ್ತಾಂತಗಳು ದುಷ್ಯಂತನ ಅಂತಹ ಕ್ಲೇಶ ಮುಂದುವರಿಯುವುದರ ಬೆಳವಣಿಗೆಗಳು.

# ಆರನೆಯ ಅಂಕ

[ಕಾಲ—ಹಿಂದಿನ ಅಂಕದ ಕಥಾಭಾಗಕ್ಕೂ ಈ ಅಂಕದ ಘಟನೆಗಳಿಗೂ ನಡುವೆ ಸುಮಾರು ಐದು ವರ್ಷಗಳ ಅಂತರವಿರಬೇಕೆಂದು ಊಹಿಸಲಾಗಿದೆ. "ಸತಿ ಖಲು ದೀಪೇ" ಎಂಬ ಸಾನುಮತಿಯ ಮಾತಿನಿಂದ ದುಷ್ಯಂತನಿಗೆ ಪುತ್ರೋತ್ಸವ ವಾಗಿದೆಯೆಂಬುದು ಸ್ಪಷ್ಟವಾಗುತ್ತದೆ. ಈ ಅಂಕದ ಮತ್ತು ಮುಂದಿನ ಅಂಕದ ಘಟನೆಗಳು ಒಟ್ಟಿಗೆ ನಡೆದಂತಿದ್ದು ಅವುಗಳ ಮಧ್ಯೆ ಕಾಲದ ಅಂತರ ಹೆಚ್ಚಾಗಿಲ್ಲವೆಂಬ ಕಾರಣದಿಂದಲೂ, ದುಷ್ಯಂತ ಶಕುಂತಲೆಯರ ಪುನಸ್ಸ ಮಾಗಮದ ವೇಳೆಗೆ ಸರ್ವದಮನನು ಸುಮಾರು ಐದಾರು ವರ್ಷದ ಬಾಲಕನಾಗಿ ಕಂಡು ಬರುವುದೂ ಮೇಲ್ಕಂಡ ಊಹೆಗೆ ಆಧಾರಗಳಾಗಿವೆ. ಅಂಕದ ಮೊದಲಲ್ಲಿ ಕಂಡುಬರುವ ಧೀವರವೃತ್ತಾಂತಕ್ಕೂ ಅನಂತರದ ಘಟನೆಗಳಿಗೂ ಮಧ್ಯೆ ಸುಮಾರು ಹದಿನೈದು ದಿನಗಳ ಅಂತರವಿರಬೇಕೆಂದು ಭಾವಿಸಲಾಗಿದೆ. ಅಂಕದ ಮುಖ್ಯ ಘಟನೆಗಳು ಪ್ರಾತಃಕಾಲ ಪ್ರಾರಂಭವಾಗಿ ದಿನಪೂರ್ತಿ ನಡೆದಿರಬೇಕೆಂದು ತೋರುತ್ತದೆ.]

ಮಿಂಚಿನ ವೇಗದಲ್ಲಿ ನಡೆದುಹೋದ ಐದನೆಯ ಅಂಕದ ದುರಂತಘಟನೆಯ ನಂತರ ಈ ಅಂಕದ ಪ್ರವೇಶಕದಲ್ಲಿ ಕಂಡುಬರುವ ಧೀವರ ವೃತ್ತಾಂತವು ಪ್ರೇಕ್ಷಕರಿಗೆ ಅತ್ಯಾವಶ್ಯಕವಾದ "ಹಾಸ್ಯ ವಿಶ್ರಾಂತಿ"ಯನ್ನೊದಗಿಸುತ್ತದೆ. ಉಂಗುರ ಸಿಕ್ಕಿದುದು ಒಂದು ರೀತಿಯ ಸಮಾಧಾನವನ್ನು ತಂದರೂ ಮುಖ್ಯವಾದ ಪುನಸ್ಸಮಾಗಮದ ಸಮಸ್ಯೆಯು ಬಗೆಹರಿಯದೆ ಉಳಿದು ಕುತೂಹಲವನ್ನು ಕೆರಳಿಸುತ್ತದೆ. ದುಷ್ಯಂತನ ಭಾಗಕ್ಕೆ ಉಂಗುರದ ದರ್ಶನವು ಶಾಪವನ್ನು ಕೊನೆಗಾಣಿಸಿ ಶಕುಂತಲೆಯ ಪ್ರಣಯಕ್ಕೆ ಸಂಬಂಧಿಸಿದ ಹಿಂದಿನ ಘಟನೆಗಳನ್ನೆಲ್ಲ ನೆನಪಿಗೆ ತಂದುಕೊಡುತ್ತದೆ. ಆದರೆ ಇದರ ಪರಿಣಾಮ ಇನ್ನೂ ಕರುಣಾಜನಕವಾಗುತ್ತದೆ. ಈ ವೇಳೆಗೆ ಸರಿಯಾಗಿ ಮೇನಕೆಯ ಪ್ರಿಯಸಖಿಯೂ ಶಕುಂತಲೆಯ ಹಿತಕಾಂಕ್ಷಿಣಿಯೂ ಆದ ಸಾನುಮತಿಯೆಂಬ ಅಪ್ಸರೆಯು ಹಸ್ತಿನಾಪುರದ ಕಡೆಗೆ ಬರುವಳು. ಅರಮನೆಯಲ್ಲಾಗಲೀ ರಾಜಧಾನಿ ಯಲ್ಲಾಗಲೀ ಸ್ವಾಭಾವಿಕವಾಗಿ ನಡೆಯುತ್ತಿರಬೇಕಾಗಿದ್ದ ವಸಂತೋತ್ಸವದ ಸಡಗರ ವೊಂದನ್ನೂ ಕಾಣದೆ, ಇದನ್ನೆಲ್ಲ ನಿಷೇಧಿಸಿದ್ದ ರಾಜಾಜ್ಞೆಯ ವಿಚಾರವನ್ನರಿತು ದುಃಖಿಸುವಳು. ತನ್ನಲ್ಲಿದ್ದ ತಿರಸ್ಕರಿಣೀ ವಿದ್ಯೆಯ ಬಲದಿಂದ ಯಾರಿಗೂ ಕಾಣಿಸಿ ಕೊಳ್ಳದಂತೆ ನಿಂತು ಅಲ್ಲಿನ ವಿದ್ಯಮಾನಗಳನ್ನೆಲ್ಲ ಗಮನಿಸುವಳು. ದುಷ್ಯಂತನು ವಿದೂಷಕನೊಡನೆ ಮಾಧವೀ ಲತಾಮಂಡಪದಲ್ಲಿ ಕುಳಿತು ತನ್ನ ದುಃಖವನ್ನು ಹೇಳಿಕೊಳ್ಳುವನು. ಶಕುಂತಲೆಯನ್ನು ನಿರಾಕರಿಸಿದ ಅಪರಾಧದ ದೆಸೆಯಿಂದಲೂ, ಅಪ್ಸರಸ್ತೀರ್ಥದ ಬಳಿ ಜ್ಯೋತಿಯೊಂದು ಇಳಿದು ಬಂದು ಅವಳನ್ನೆತ್ತಿಕೊಂಡು ಹೋಗಿದ್ದ ಕಾರಣದಿಂದಲೂ, ಅವಳೊಡನೆ ಪುನಸ್ಸಮಾಗಮದ ಅವಕಾಶಲೇಶವನ್ನೂ

ಕಾಣದೆ ಅತ್ಯುತ್ಕಟವಾದ ವಿರಹವ್ಯಥೆಯಿಂದ ಉನ್ಮತ್ತನಂತೆ ಪರಿತಪಿಸುವನು. ಪೂರ್ವ ವೃತ್ತಾಂತಗಳೆಲ್ಲ ಒಂದೊಂದಾಗಿ ನೆನಪಿಗೆ ಬಂದು ವಿಷಮಯ ಬಾಣಗಳಂತೆ ಅವನನ್ನು ಇರಿಯುವುವು. ಶಕುಂತಲೆಯನ್ನು ಯಾರು ಕರೆದೊಯ್ದಿರಬೇಕೆಂಬ ಊಹೆ; ಉಂಗುರ ಸಿಕ್ಕಿದ ಪ್ರಸಂಗ, ಅದನ್ನು ಶಕುಂತಲೆಗೆ ಕೊಟ್ಟ ಹಿಂದಿನ ಕಥೆ, ಮತ್ತು ಆ ಉಂಗುರದಿಂದಾದ ತೊಂದರೆ; ತಾನೇ ಬರೆದಿದ್ದ ಶಕುಂತಲೆಯ ಚಿತ್ರವನ್ನು ತರಿಸಿ ಅದನ್ನು ಪೂರ್ಣಗೊಳಿಸುವ ವಿಧಾನದ ವಿವರಣೆ ಇತ್ಯಾದಿ ಸಂದರ್ಭಗಳಲ್ಲಿ ಮಾತುಗಳು ಬೆಳೆದಂತೆಲ್ಲ ಕ್ಷಣಕ್ಷಣಕ್ಕೂ ದೊರೆಯ ದುಃಖ ಹಂಬಲಗಳು ಹೆಚ್ಚುತ್ತವೆ. ಕೊನೆಗೆ ಆಡಳಿತಾಧಿಕಾರಕ್ಕೆ ಸಂಬಂಧಿಸಿದಂತೆ ತೀರ್ಪಿಗಾಗಿ ಮುಂದಿಡಲ್ಪಟ್ಟ ಧನಮಿತ್ರನ ಪ್ರಸಂಗವೂ ಕೂಡ ಉರಿಯುವ ಗಾಯಕ್ಕೆ ಉಪ್ಪುಹಾಕಿದಂತೆ ದುಷ್ಯಂತನ ಮನಸ್ಸಿಗೆ ಅನಪತ್ಯತೆಯ ಅರಿವನ್ನುಂಟುಮಾಡಿ ಹೆಚ್ಚಿನ ದುಃಖಕ್ಕೆ ಕಾರಣವಾಗುತ್ತದೆ. ಇದನ್ನೆಲ್ಲ ಗಮನಿಸುತ್ತಿದ್ದ ಸಾನುಮತಿಗೆ ದುಷ್ಯಂತನ ವಿಷಯದಲ್ಲಿ ಪೂರ್ಣಸಹಾನುಭೂತಿಯುಂಟಾಗಿ ಇವನ ಅಕಳಂಕ ಸ್ವಭಾವ, ಶಕುಂತಲಾ ಪ್ರೇಮ ಮತ್ತು ಅನಪರಾಧಿತ್ವಗಳ ಬಗ್ಗೆ ನಂಬಿಕೆ ಹುಟ್ಟುವುದು. ಈ ದುಃಖವನ್ನು ಹೋಗಲಾಡಿಸಿ ಹೇಗಾದರೂ ಪ್ರಿಯಪ್ರೇಯಸಿಯರ ಪುನಸ್ಸಮಾಗಮವನ್ನು ನೆರವೇರಿಸಬೇಕೆಂಬ ಆಶೆಯೂ ಹುಟ್ಟುವುದು. ಆದರೆ ಶಕುಂತಲೆಯನ್ನು ಸಂತೈಸುತ್ತಿದ್ದ ಮಹೇಂದ್ರ ಜನನಿಯ ಆಶಂಸೆಗನುಸಾರವಾಗಿ ಇದು ಕ್ಷಿಪ್ರದಲ್ಲೇ ನಡೆಯುವುದೆಂದು ತಿಳಿದಿದ್ದ ಕಾರಣ ತಾನು ಇಲ್ಲಿ ನೋಡಿ ಕೇಳಿದ್ದನ್ನೆಲ್ಲ ಸಖಿಗೆ ತಿಳಿಸಬೇಕೆಂದು ತ್ವರೆಯಿಂದ ಹಾರಿಹೋಗುವಳು.

ಅಂಕದ ಕೊನೆಯಲ್ಲಿ ಬರುವ ವಿದೂಷಕನಿಗೆ ಪಿಶಾಚ ಹಿಡಿದ ಪ್ರಸಂಗವು ದುಃಖಸಾಗರದಲ್ಲಿ ಮುಳುಗಿದ್ದ ದುಷ್ಯಂತನ ಉತ್ಸಾಹವನ್ನು ಕುದುರಿಸಿ, ಇಂದ್ರನ ಯುದ್ಧೋದ್ಯಮದಲ್ಲಿ ಭಾಗವಹಿಸುವುದಕ್ಕಾಗಿ ಮಾತಲಿಯೊಡನೆ ದೇವಲೋಕಕ್ಕೆ ಹೊರಡುವಂತೆ ಪ್ರೇರಿಸುತ್ತದೆ.

(ಪುಟ 59)

नागरिकः—ನಗರ ರಕ್ಷಕರ ಮೇಲಧಿಕಾರಿ ; श्यालः—ದೊರೆಯ ಭಾವಮೈದುನ.

कुम्भीरकः — ಕಳ್ಳ; भावमिश्राः — ಪೂಜ್ಯರು (ಗೌರವಾರ್ಥಕ — मान्यो भावस्तु वक्तव्यः)

प्रतिग्रहः—ದಾನ ; धीवरः—ಬೆಸ್ತ.

पाटच्चरः—ಕಳ್ಳ, ದರೋಡೆಕೋರ ; सूचकः—ರಕ್ಷಕನೊಬ್ಬನ ಹೆಸರು.

आवुत्तः — ಭಾವ ; (ತನಗಿಂತ ಉತ್ತಮ ಮಟ್ಟದವರನ್ನು ಸಂಬೋಧಿಸುವಾಗ ಕೇವಲ ಗೌರವಾರ್ಥಕವಾಗಿಯೂ ಉಪಯೋಗಿಸಲ್ಪಡುತ್ತದೆ — भगिनीपतिरावुत्तो भावो विद्वानथावुकः ಅಮರ).

जालम्—(ಮೀನು ಹಿಡಿಯುವ) ಬಲೆ ; उद्गाल:–ಗಾಳ.

विशुद्ध इदानीमाजीव:—ಒಳ್ಳೆಯ ಶುದ್ಧವಾದ ಜೀವನೋಪಾಯ ! (ವ್ಯಂಗ್ಯವನ್ನು ಗಮನಿಸಿ.)

ಪದ್ಯ—1 (ಅನ್ವಯ) यत् कर्म सहजं तत् विनिन्दितम् (अपि) न विवर्जनीयम् किल। श्रोत्रिय: पशुमारणकर्मदारुणोऽपि अनकम्पामृदुरेव ॥

'ಯಾವ ವೃತ್ತಿ ಅಥವಾ ಕರ್ಮವು ವಂಶಪಾರಂಪರ್ಯವಾಗಿ (ಹುಟ್ಟಿನಿಂದ) ನಡೆದುಬಂದಿದೆಯೋ ಅದು ನಿಂದ್ಯವಾಗಿದ್ದರೂ ಬಿಟ್ಟುಬಿಡಲು ಅರ್ಹವಲ್ಲ; ಯಾಗದಲ್ಲಿ ನಿರ್ಘೃಣನಾಗಿ ಪಶುವನ್ನು ಕೊಲ್ಲುವನಾದರೂ ಶ್ರೋತ್ರಿಯನು ಕರುಣೆಯಿಂದ ಮೃದುವಾಗಿಯೇ ಇರುತ್ತಾನೆ.'

श्रोत्रिय:—ನೋಡಿ–जन्मना ब्राह्मणो ज्ञेय: संस्काराद्द्विज उच्यते।
विद्यया याति विप्रत्वं त्रिभि: श्रोत्रिय उच्यते ॥

ಶ್ರೋತ್ರಿಯನಾದ ಬ್ರಾಹ್ಮಣನು ಯಜ್ಞಯಾಗಾದಿಗಳಲ್ಲಿ ಶಾಸ್ತ್ರವಿಹಿತವಾದ ಪ್ರಾಣಿವಧೆಯನ್ನು ಮಾಡಿದ ಮಾತ್ರಕ್ಕೆ ಅವನಿಗೆ ಮಾನವ ಸಹಜವಾದ ಕರುಣೆಯೇ ಇಲ್ಲವೆಂದು ಹೇಳಲು ಸಾಧ್ಯವೇ ? ಹಾಗೆಯೇ ಹುಟ್ಟಿನಿಂದ ಬಂದ ಮೀನು ಹಿಡಿಯುವ ವೃತ್ತಿಯಿಂದ ಜೀವನವನ್ನು ನಡೆಸಿದ ಮಾತ್ರಕ್ಕೆ ಅವನ ಜೀವನವೇ ಅಶುದ್ಧವೇ ? ಎಂಬುದು ಬೆಸ್ತನ ವಾದ.

पशूनां मारणं पशुमारणम्, पशुमारणमेव कर्म; तेन दारुण:—(श्रोत्रिय: ಎಂಬುದರ ವಿಶೇಷಣ.) ಶ್ರೋತ್ರಿಯನಾದವನು ಕರುಣಾಮೂಲಕವಾದ ಮೃದು ಸ್ವಭಾವಕ್ಕೆ ಪ್ರಸಿದ್ಧನಾಗಿದ್ದನೆಂದು ತೋರುತ್ತದೆ.

रोहितमत्स्य:—ಒಂದು ಬಗೆಯ ಕೆಂಪುಮೀನು. (ಸುಮಾರು ಮೂರು ಅಡಿ ಉದ್ದವಿರುತ್ತದೆ.

खण्डश: कल्पित: — ಚೂರುಚೂರಾಗಿ ಕತ್ತರಿಸಲ್ಪಟ್ಟಿತು. कल्पित: ಎಂಬುದು क्लृप् कर्तने ಧಾತುವಿನ ಭೂ. ಕೃ. ರೂಪ.)

रत्नभासुरं ರತ್ನಗಳಿಂದ ಪ್ರಕಾಶಮಾನವಾದ.

मारयत वा मुञ्चत वा—ಕೊಲ್ಲಿರಿ ಇಲ್ಲವೇ ಬಿಟ್ಟುಬಿಡಿ.

आगमवृत्तान्त:—ಸಿಕ್ಕಿದ ಬಗೆ. जानुक:—ಇನ್ನೊಬ್ಬ ರಕ್ಷಕನ ಹೆಸರು.

विस्रगन्धी—ಮಾಂಸದ ವಾಸನೆಯನ್ನು ಹೊಂದಿರುವ. गोधादी-गोधा ಎಂಬುದು ಒಂದು ಬಗೆಯ ಜಲಚರ. ಅದನ್ನು ತಿನ್ನುವವನು गोधादिन्.

ग्रन्थिभेदक:—ಗಂಟುಕಳ್ಳ.

(ಪುಟ 60)

गोपुरद्वारे—ನಗರದ ಹೆಬ್ಬಾಗಿಲ ಬಳಿ. (पुरद्वारं तु गोपुरम्-ಅಮರ)
अवसरोपसर्पणीयः—ಸಮಯ ಕಾದು ಕಾಣಲ್ಪಡತಕ್ಕವರು (ದೊರೆಗಳು)
स्फुरतः—ಚಡಪಡಿಸುತ್ತಿವೆ. सुमनसः पिनद्धम्—ಮರಣದಂಡನೆಯನ್ನು ಪಡೆದ ವ್ಯಕ್ತಿಯನ್ನು ಕೊಲ್ಲುವ ಮುನ್ನ ಕುತ್ತಿಗೆಗೆ ಕೆಂಪು ಹೂವಿನ ಮಾಲಿಕೆಯನ್ನು ಹಾಕುವ ಪದ್ಧತಿಯಿತ್ತು.
अकारणमारणो भवितुम्—ಅಕಾರಣವಾಗಿ ಕೊಲೆಗಡುಕನಾಗುವುದು.
गृध्रबलिः—ಹದ್ದುಗಳಿಗೆ ಬಲಿಯಾಗಿ ಎಸೆಯುವುದು.
शुनो मुखं—ಇದು ಕಳ್ಳನಿಗೆ ವಿಧಿಸುತ್ತಿದ್ದ ಮತ್ತೊಂದು ವಿಧವಾದ ಶಿಕ್ಷೆ. ಸೊಂಟದುದ್ದ ಹಳ್ಳತೋಡಿ ಅದರಲ್ಲಿ ಕಳ್ಳನನ್ನು ಹೂತಿಟ್ಟು ಅವನನ್ನು ಕಚ್ಚಿ ತಿನ್ನುವುದಕ್ಕಾಗಿ ನಾಯಿಗಳನ್ನು ಬಿಡುತ್ತಿದ್ದುದು.
उपपन्नः—ಯುಕ್ತಿಯುಕ್ತವಾಗಿದೆ.
अथ कीदृशो....आजीवः—ಬಿಡುಗಡೆ ಹೊಂದಿದ ಬೆಸ್ತನ ಈ ಪ್ರಶ್ನೆ ಅವನದೇ ಮೇಲುಗೈ ಎಂಬುದನ್ನು ತೋರಿಸುತ್ತದೆ.
अङ्गुलीयकमूल्यसंमितः—ಉಂಗುರದ ಬೆಲೆಗೆ ಸಮನಾದ;
दापितः—ಕೊಡಲ್ಪಟ್ಟದೆ. दा. ಧಾತುವಿನ ಪ್ರೇರಣಾರ್ಥಕ ಭೂತ ಕೃದಂತ.
एष नामानुग्रहः....प्रतिष्ठापितः — ಶೂಲದ ಮೇಲಿನಿಂದಿಳಿಸಿ ಆನೆಯ ಮೇಲೆ ಕುಳ್ಳಿರಿಸಲ್ಪಟ್ಟ; ಅನುಗ್ರಹವೆಂದರೆ ಇದಲ್ಲವೇ ?

(ಪುಟ 61)

पर्यश्रुनयनः ಕಣ್ಣೀರು ತುಂಬಿದವನಾಗಿ. सुमनोमूल्यं—ಹೂವಿನ ಖರ್ಚಿಗಾಗಿ
कादम्बरीसाक्षिकं—ಹೆಂಡದ ಇದಿರಲ್ಲಿ. कादम्बरी ಎಂಬುದು ಕದಂಬದ ಹೂವಿನಿಂದ ತಯಾರಿಸಿದ ಮಾದಕ ಪಾನೀಯ.
शौण्डिकापणं—ಮದ್ಯದಂಗಡಿ. प्रवेशकः—ಪರಿಶಿಷ್ಟ ನೋಡಿ.
पर्यायनिर्वर्तनीयम् — ಸರದಿಯ ಪ್ರಕಾರ ನಡೆಸಬೇಕಾದ; शरीरेण समा = शरीरभूता. तया च दुहितृ....पूर्वास्मि ಈ ಕಾರಣದಿಂದಲೇ ಸಾನುಮತಿಯು ದುಷ್ಯಂತನ ರಾಜಧಾನಿಯ ಕಡೆಗೆ ಬಂದಿರುವುದು.
प्रणिधानेन—ಮನಸ್ಸಿನ ಸಮಾಧಿಸ್ಥಿತಿಯಿಂದ.
तिरस्करिणीप्रतिच्छन्ना — ತಿರಸ್ಕರಿಣೀ ವಿದ್ಯೆಯಿಂದ ಮರೆ ಮಾಚಿಕೊಂಡು; ಯಾರಿಗೂ ಕಾಣಿಸಿಕೊಳ್ಳದಂತೆ.

ಪದ್ಯ—2 (ಅನ್ವಯ) आताम्रहरितपाण्डुर, वसन्तमासस्य जीवितसर्वस्व, चूतकोरक, दृष्टोऽसि ; ऋतुमङ्गल त्वां प्रसादयामि ॥

'ವಸಂತ ಮಾಸದ ಜೀವಿತವೆನಿಸಿದ ಕೆಂಪು ಹಸಿರು ಮಿಶ್ರವಾದ ಕಂದು ಬಣ್ಣದ ಮಾವಿನಚಿಗುರೇ : ನಿನ್ನನ್ನು ಕಂಡೆ ! ಋತುವಿಗೆ ಮಂಗಳಕರನಾದ ನಿನ್ನನ್ನು ಪೂಜಿಸುವೆನು.'

(ಪುಟ 62)

चूतकलिकां दृष्ट्वा....भवति—परभृतिका ಎಂದರೆ ಕೋಗಿಲೆ ಎಂದೂ ಅರ್ಥವಿದೆ. ಇಲ್ಲಿನ ಶ್ಲೇಷೆಯನ್ನು ಗಮನಿಸಿ.

अग्रपादस्थिता—ಮೆಟ್ಟುಕಾಲಿನಲ್ಲಿ ನಿಂತು. अप्रतिबुद्धः— ಇನ್ನೂ ಅರಳದೆ ಇದ್ದರೂ.

कपोतहस्तकं कृत्वा—ಅಂಗೈಗಳನ್ನು ಮೊಗ್ಗಿನ ಆಕಾರದಲ್ಲಿ ಕೂಡಿಸಿ ;

ಪದ್ಯ—3 (ಅನ್ವಯ) (हे) चूताङ्कुर; त्वं मया गृहीतधनुषे कामाय दत्तोऽसि। पथिकजनयुवतिलक्ष्यः पञ्चाभ्यधिकः शरो भव।

'ಎಲೈ ಮಾವಿನ ಚಿಗುರೇ, ಬಿಲ್ಲನ್ನು ಹಿಡಿದ ಮನ್ಮಥನಿಗೆ ನೀನು ನನ್ನಿಂದ ದಾನಮಾಡಲ್ಪಟ್ಟಿರುವೆ; ಪಾಂಥವನಿತೆಯರನ್ನೇ ಗುರಿಯಾಗಿ ಉಳ್ಳ ಐದರಲ್ಲಿ ಬಲಿಷ್ಠ ಬಾಣವಾಗು.'

अपटीक्षेपेण—ತೆರೆಯನ್ನು ಪಕ್ಕಕ್ಕೆ ತಳ್ಳಿ "ಇದ್ದಕ್ಕಿದ್ದಂತೆ." ಹೀಗೆ ರಂಗಸೂಚನೆಯಿರುವಲ್ಲಿ ಪಾತ್ರಗಳ ಪ್ರವೇಶವನ್ನು ಮೊದಲು ಸೂಚಿಸಬೇಕಾಗಿಲ್ಲ. (ಪರಿಶಿಷ್ಟ ನೋಡಿ)

अनात्मज्ञे—ಅರಿವಿಲ್ಲದವಳೇ. अगृहीतार्थे—ಈ ವಿಷಯವನ್ನು ತಿಳಿಯದವರು.

वासन्तिकैः—ವಸಂತಕಾಲದಲ್ಲಿ ಹೂ ಬಿಡುವ. ಇದು वसन्तात् च (ಪಾ. IV 320) ಸೂತ್ರಾನುಸಾರ ಸಿದ್ಧಿಸುವ ವೈದಿಕರೂಪ. ಲೌಕಿಕ ಸಂಸ್ಕೃತದಲ್ಲಿ अण् ಪ್ರತ್ಯಯ ಹಚ್ಚಿ वासन्त ಎಂದಾಗಬೇಕಾಗುತ್ತದೆ.

देवस्य शासनं प्रमाणीकृतम्—ದೊರೆಯ ಅಪ್ಪಣೆಯು ನಡೆಸಲ್ಪಟ್ಟಿದೆ. पत्रिभिः—ಪಕ್ಷಿಗಳಿಂದಲೂ

राष्ट्रियेण—ದೊರೆಯ ಭಾವಮೈದುನನಿಂದ (राज्ञः श्यालस्तु राष्ट्रियः—ಅಮರ.)

(ಪುಟ 63)

बहुलीभूतम्—ಎಲ್ಲರಿಗೂ ತಿಳಿದದ್ದು ; ಎಲ್ಲೆಲ್ಲೂ ಹರಡಿದ್ದು.

शकुन्तलाप्रत्यादेशकौलीनम्—ಶಕುಂತಲೆಯನ್ನು ನಿರಾಕರಿಸಿದ ಅಪವಾದ. स्थाने खलु....क्षाम्यति ನಿರಾಕರಣೆಯಿಂದ ಅವಮಾನಗೊಳಿಸಲ್ಪಟ್ಟರೂ ಶಕುಂತಲೆಯು ಇವನಿಗಾಗಿ ತವಕಿಸುತ್ತಿರುವುದು ಯುಕ್ತವೇ ಆಗಿದೆ. ದುಷ್ಯಂತನು ಅಷ್ಟು ರೂಪವಂತನೆಂಬುದನ್ನು ಸಾನುಮತಿ ಕಾಣುತ್ತಾಳೆ.

(ಪುಟ 64)

ಪದ್ಯ—4 (ಅನ್ವಯ), सारङ्गाक्ष्या प्रियया प्रथमं प्रतिबोध्यमानमपि सुप्तम् इदं हतहृदयं संप्रति अनुशयदुःखायविबुद्धम् ॥

'ಮೊದಲು ಕುರಂಗಾಕ್ಷಿಯಾದ ಪ್ರಿಯೆಯಿಂದ ಎಚ್ಚರಗೊಳಿಸಲ್ಪಡುತ್ತಿದ್ದರೂ ನಿದ್ರಿಸುತ್ತಿದ್ದ ಈ (ನನ್ನ) ಕುತ್ಸಿತವಾದ ಹೃದಯವು ಈಗ ಪಶ್ಚಾತ್ತಾಪದ ದುಃಖವನ್ನು ಅನುಭವಿಸುವುದಕ್ಕಾಗಿ ಎಚ್ಚೆತ್ತಿದೆ.'

लङ्घितः—ಸೆಳೆಯಲ್ಪಟ್ಟಿದ್ದಾನೆ. ಆಕ್ರಮಿಸಲ್ಪಟ್ಟಿದ್ದಾನೆ.

यथाकामम् — (ಅ) ಇಚ್ಛೆಗೆ ತಕ್ಕಂತೆ. विनोदस्थानानि अध्यास्ताम् अधिशीङ्स्थासां कर्म ಎಂಬ ಸೂತ್ರಾನುಸಾರ विनोदस्थानानि ಎಂಬಲ್ಲಿ ಕರ್ಮ ವಿಭಕ್ತಿ ಬಂದಿದೆ.

चिरप्रबोधात्—ವಿಲಂಬದಿಂದ (ಕಾಲವಿಳಂಬ) ಎಚ್ಚರಹೊಂದಿದ ಕಾರಣ.

धर्मासनम् अध्यासितुम्—ಧರ್ಮಾಸನವನ್ನು ಅಲಂಕರಿಸಿ ತೀರ್ಪುಗಳನ್ನು ಕೊಡುವ ಅಧಿಕಾರವನ್ನು ನಿರ್ವಹಿಸಲು (ಮೇಲಿನಂತೆ धर्मासनम् ಎಂಬಲ್ಲಿ ಕರ್ಮ ವಿಭಕ್ತಿ.) ದೊರೆಯೇ ನ್ಯಾಯಾಂಗದ ಪರಮೋನ್ನತ ಅಧಿಕಾರಿಯಾಗಿ ಪ್ರತಿದಿನವೂ ಸ್ವಲ್ಪ ಕಾಲ ಈ ಕೆಲಸವನ್ನು ನಿರ್ವಹಿಸುತ್ತಿದ್ದಂತೆ ತೋರುತ್ತದೆ.

पत्रमारोप्य—ಪತ್ರದಲ್ಲಿ ಬರೆದು.

निर्मक्षिकम्—मक्षिकाणामभावः—अव्ययं विभक्तिसमीप ಇತ್ಯಾದಿ ಸೂತ್ರದಿಂದ ಅವ್ಯಯೀಭಾವ ಸಮಾಸ ಬಂದಿದೆ. ನೊಣವೂ ಇಲ್ಲದಂತೆ ನಿರ್ಜನವಾಗಿದೆಯೆಂದು ತಾತ್ಪರ್ಯ.

शिशिर....रमणीये—ಅತಿಯಾದ ಛಳಿಯೂ ಇಲ್ಲ ಬಿಸಿಲೂ ಇಲ್ಲದಂತೆ ರಮಣೀಯ ವಾಗಿರುವ.

रन्ध्रोपनिपातिनः अनर्थाः—ಅನರ್ಥಗಳೆಲ್ಲ ಅವಕಾಶ ಸಿಕ್ಕಿದೆಡೆ ಒಟ್ಟಿಗೇ ಮೇಲೆ ಬೀಳುತ್ತವೆ. "छिद्रेष्वनर्था बहुलीभवन्ति" ಎಂಬ ಗಾದೆಯೂ ಇದೇ ಅರ್ಥ ಕೊಡುತ್ತದೆ. अव्यभिचारि—ಅಪವಾದವಿಲ್ಲದ್ದು. ಯಾವಾಗಲೂ ಸತ್ಯ.

ಪದ್ಯ—5 (ಅನ್ವಯ) इदं मम मनः मुनिसुताप्रणयस्मृतिरोधिना तमसा मुक्तम् । (हे) सखे प्रहरिष्यता मनसिजेन धनुषि चूतशरश्च निवेशितः ।

'ಈ ನನ್ನ ಮನಸ್ಸು ಋಷಿಯ ಮಗಳಾದ ಶಕುಂತಲೆಯ ಪ್ರಣಯದ ನೆನಪನ್ನು ತಡೆಗಟ್ಟಿದ್ದ ಕತ್ತಲಿನಿಂದ (ಅಜ್ಞಾನದ ಮಂಕಿನಿಂದ) ಬಿಡುಗಡೆ ಹೊಂದಿದೆ. ಸ್ನೇಹಿತನೇ, ಹೊಡೆಯಲಿರುವ ಮನ್ಮಥನು ಬಿಲ್ಲಿನಲ್ಲಿ ಮಾವಿನ ಚಿಗುರಿನ ಬಾಣವನ್ನೂ ಹೂಡಿದ್ದಾನೆ.'

ಶಕುಂತಲೆಯ ಪ್ರಣಯದ ನೆನಪನ್ನು ಹೊಂದಿ ಪಶ್ಚಾತ್ತಾಪ ಪಡುವ ವೇಳೆಗೆ ಸರಿಯಾಗಿ ವಸಂತಋತುವೂ ಪ್ರಾಪ್ತವಾಗಿ ವಿರಹವೇದನೆಯನ್ನು ತೀವ್ರಗೊಳಿಸಿದೆ. ಆದುದರಿಂದಲೇ ಅನರ್ಥಗಳು ಒಂದರಮೇಲೊಂದು ಒದಗಿದಂತಾಗಿ ಹೆಚ್ಚಿನ ನೋವಿಗೆ ಕಾರಣವಾಗಿದೆಯೆಂದು ತಾತ್ಪರ್ಯ.

मुनेः सुता–मुनिसुता–तस्याः प्रणयः; प्रणयस्य स्मृतिः—तां रुणद्धि इति–मुनि... रोधी, तेन.

प्रहरिष्यता—प्र ಉಪಸರ್ಗದಿಂದ ಕೂಡಿದ हृ ಧಾತುವಿನ ಭವಿಷ್ಯತ್ ಕೃದಂತ (ಪು). ತೃ. ಏ.

किंचिदनुकारिणीषु—ಸ್ವಲ್ಪಮಟ್ಟಿಗೆ ಹೋಲುವ.

(ಪುಟ 65)

स्वहस्तलिखितां प्रतिकृतिम्—ತನ್ನಿಂದಲೇ ಬರೆಯಲ್ಪಟ್ಟ ಚಿತ್ರವನ್ನು; ಇದು ದೊರೆಯ ಚಿತ್ರಕಲಾಕೌಶಲವನ್ನು ಸೂಚಿಸುತ್ತದೆ. ಅರ್ಥಾತ್ ಈ ಚಿತ್ರವನ್ನು ದುಷ್ಯಂತನು ಶಕುಂತಲೆಯ ಸ್ಮೃತಿಲಾಭದ ನಂತರ ಬರೆದಿರಬೇಕೆಂದು ಊಹಿಸ ತಕ್ಕದ್ದು. ಚಿತ್ರಲೇಖನ, ಸ್ವಪ್ನದಲ್ಲಿ ಪರಸ್ಪರ ಸಮಾಗಮವನ್ನು ಕಾಣುವುದು ಮೊದಲಾದ ಸ್ಥಿತಿಗಳು ವಿಪ್ರಲಂಭಶೃಂಗಾರದ ಅವಸ್ಥಾವಿಶೇಷಗಳು. ಇಂತಹ ಸ್ಮರದಶೆಗಳು ಹತ್ತೆಂದು ಪ್ರಸಿದ್ಧವಾಗಿವೆ.

उपहाररमणीयतया—(ಉದುರಿದ) ಹೂಗಳಿಂದ ಸುಂದರವಾಗಿ ಕಾಣುವುದರಿಂದ.

ततस्तस्यै भर्तुर्बहुसुखमनुरागं निवेदयिष्यामि—ಇದರಿಂದಲೇ ನಿರಾಕರಣದ ಅವಮಾನದಿಂದ ನೊಂದ ಶಕುಂತಲೆಯ ಹೃದಯವು ಪುನಸ್ಸಮಾಗಮಕ್ಕೆ ತಕ್ಕ ಮಾರ್ದವವನ್ನು ಪಡೆಯಲು ಸಹಾಯವಾಗುತ್ತದೆ.

कच्चिदहमिव....त्वम्—ಹಿಂದಿನ ಕಥಾಸನ್ನಿವೇಶದಿಂದ ಉದ್ಭವಿಸುವ ಒಂದು ಆಶಂಕೆ; ವಿದೂಷಕನ ಮುಂದಿನ ಮಾತು ಇದಕ್ಕೆ ಸರಿಯಾದ ಸಮಾಧಾನವನ್ನು ಕೊಡುತ್ತದೆ.

मृत्पिण्डबुद्धिना—ಮಣ್ಣುಮುದ್ದೆಯ ಬುದ್ಧಿಯುಳ್ಳ (ದಡ್ಡಮನಸ್ಸುಳ್ಳ) (मया ವಿ.)

भवितव्यता — ವಿಧಿ ಅದೃಷ್ಟ. शोकवास्तव्याः ದುಃಖಕ್ಕೆ ನಿವಾಸವಾಗಿ, ನೆಲೆಯಾಗಿ.

ननु प्रवातेऽपि निष्कम्पा गिरयः—ಸುಂಟರಗಾಳಿಯಲ್ಲೂ ಬೆಟ್ಟಗಳು ಅಲುಗಾಡ ದಂತಿಲ್ಲವೇ ?

(ಪುಟ 66)

(निराकरण) निष्कारणविक्लवायाः — ಅಕಾರಣವಾಗಿ (ನಿರಾಕರಣದಿಂದ) ದುಃಖಿತಳಾದ

समत्रस्थानम—ಸ್ಥಿತಿಯನ್ನು ; बलवदशरण:—ಬಹಳ ಪಟ್ಟಿಗೆ ಅಶಾಂತನಾಗಿ.

ಪದ್ಯ—6 (ಅನ್ವಯ) इत: प्रत्यादेशात् स्वजनम् अनुगन्तुं व्यवसिता गुरुसमे गुरुशिष्ये "तिष्ठ" इति उच्चै: वदति स्थिता, पुन: बाष्पप्रसरकलुषां दृष्टिं क्रूरे मयि अर्पितवती (इति) यत्तत् सविषं शल्यमिव मां दहति ॥ -

"ಇಲ್ಲಿ ನಿರಾಕೃತಳಾಗಿ ತನ್ನವರನ್ನು ಹಿಂಬಾಲಿಸಲು ಉದ್ಯುಕ್ತಳಾಗಿ ತಂದೆಗೆ ಸಮನಾದ ಕಣ್ವನ ಶಿಷ್ಯನು 'ನಿಲ್ಲು' ಎಂದು ಘಟ್ಟಿಯಾಗಿ ಹೇಳಲು ಹಾಗೆಯೇ ನಿಂತು ಪುನಃ ಕಣ್ಣೀರಿನಿಂದ ಕದಡಿದ ದೃಷ್ಟಿಯನ್ನು ಕ್ರೂರನಾದ ನನ್ನ ಮೇಲೆಯೇ ಇಟ್ಟಳಲ್ಲ—ಇದು ವಿಷಮಯವಾದ ಬಾಣದಂತೆ ನನ್ನನ್ನು ಸುಡುತ್ತಿದೆ".

प्रत्यादेशात्—ನಿರಾಕರಣದ ದೆಸೆಯಿಂದ ; गुरुशिष्ये—ತಂದೆಯಾದ ಕಣ್ವರ ಶಿಷ್ಯ (ಶಾರ್ಙ್ಗರವನು) शल्यमिव—ಈಟಿ, ಅಥವಾ ಬಾಣದಂತೆ.

ईदृशी....रमे—ತನ್ನ ಕಾರ್ಯದಲ್ಲಿ ಆಸಕ್ತಿಯೆಂಬುದು ಹೀಗೆಯೇ. ಸಾಮಾನ್ಯವಾಗಿ ಇನ್ನೊಬ್ಬರು ದುಃಖಿಸುವುದನ್ನು ನೋಡಿದರೆ ದುಃಖವಾಗುವುದು ಸಹಜವಾದರೂ ಇಲ್ಲಿ ಶಕುಂತಲೆಯು ಪರವಾಗಿ ದುಷ್ಯಂತನ ಸ್ಥಿತಿಯನ್ನು ತಿಳಿಯಬೇಕೆಂದು ಬಂದಿರುವುದರಿಂದ ದೊರೆಯ ದುಃಖದಿಂದ ಇವನ ಶಕುಂತಲಾ ಪ್ರೇಮವು ವ್ಯಕ್ತವಾಗುವುದರಿಂದ ತನಗೆ ಸಂತೋಷವಾಗುತ್ತಿದೆಯೆಂಬುದು ಸಾನುಮತಿಯ ತಾತ್ಪರ್ಯ.

परामर्ष्टुम्—ಕಳಂಕಿತಳನ್ನಾಗಿ ಮಾಡಲು, ಸ್ಪರ್ಶದಿಂದ ಕೆಡಿಸಲು.

संमोह:—(ಹಿಂದೆ ಕವಿದಿದ್ದ) ಮಂಕು ; ಅಜ್ಞಾನ. प्रतिबोध:—ಎಚ್ಚರ.

द्रष्टुं न पारयत:—ನೋಡಿಕೊಂಡಿರಲಾರರು.

ಪದ್ಯ—7 (ಅನ್ವಯ) स्वप्नो नु माया नु मतिभ्रमो नु तावत् क्लिष्टं पुण्यं फलमेव तत् असंनिवृत्त्ये अतीतम् । एते मनोरथा: नाम तटप्रपाता: ॥

ಸ್ವಪ್ನವೋ ಮಾಯೆಯೋ, ಬುದ್ಧಿಭ್ರಮೆಯೋ, ಅಷ್ಟುಮಾತ್ರಕ್ಕೆ ಮುಗಿದ ಪುಣ್ಯದ ಫಲವೋ, ಮತ್ತೊಮ್ಮೆ ಸಿಗದಂತೆ ಕಳೆದುಹೋಯಿತು ! ಈ ಆಶೆಗಳೆಲ್ಲ ಕುಸಿದುಬೀಳುವ ದಡಗಳಷ್ಟೆ !

ಮುಂದೆ ಶಕುಂತಲೆಯೊಡನೆ ಸಮಾಗಮವುಂಟಾಗುವ ವಿಷಯದಲ್ಲಿ ವಿದೂಷಕನಿಗೆ ನಂಬಿಕೆಯಿದ್ದರೂ ದೊರೆ ನಿರಾಶನಾಗಿದ್ದಾನೆ. ಹಿಂದೆ ಅನುಭವಿಸಿದು ದಷ್ಟೇ ತನ್ನ ಪಾಲಿನ ಪುಣ್ಯವಾಗಿತ್ತೆಂದೂ ಮುಂದಿನ ಆಶೆಗಳೆಲ್ಲ ನದಿಯ ಪ್ರವಾಹದ ವೇಗಕ್ಕೆ ಸಿಕ್ಕಿ ಒಂದಾದಮೇಲೊಂದು ಕುಸಿದು ಬಿದ್ದು ಕೊಚ್ಚಿಹೋಗುವ ದಡದ ಮಣ್ಣಿನ ಗುಡ್ಡೆಗಳಂತೆ ಎಂದು ತಾತ್ಪರ್ಯ.

असंनिवृत्त्यै—ಮತ್ತೆ ಬಾರದೆ ಇರುವುದಕ್ಕಾಗಿ.

असुलभस्थानभ्रंशि — ದುರ್ಲಭವಾದ ಸ್ಥಾನ (ಶಕುಂತಲೆಯ ಕೈಬೆರಳು) ದಿಂದ ಜಾರಿಬಿದ್ದ (इदं-ವಿ) आकारितः—ಪ್ರಭಾವಿತನಾಗಿದ್ದಾನೆ.

(ಪುಟ 67)

ಪದ್ಯ—8 (ಅನ್ವಯ) अत्र दिवसे दिवसे एकैकं मदीयं नामाक्षरं गणय। प्रिये यावत् अन्तं गच्छसि तावत् मदवरोधगृहप्रवेशं नेता जनः तव समीपम् उपैष्यतीति ॥

"ಈ ಉಂಗುರದಲ್ಲಿ ಪ್ರತಿದಿನವೂ ನನ್ನ ಹೆಸರಿನ ಒಂದೊಂದಕ್ಷರವನ್ನು ಎಣಿಸು ; ಪ್ರಿಯೆ, ಕೊನೆ ಮುಟ್ಟುವವೇಳೆಗೆ ನಿನ್ನನ್ನು ನನ್ನ ಅಂತಃಪುರಕ್ಕೆ ಕರೆದೊಯ್ಯುವ ಜನ ಸಮೀಪಕ್ಕೆ ಬರುವರು".

विसंवादितः—ತಪ್ಪಿಸಲ್ಪಟ್ಟಿತು ; ಸುಳ್ಳಾಗಿ ಮಾಡಲ್ಪಟ್ಟಿತು.

अधर्मभीरोः—ಅಧರ್ಮಕ್ಕೆ ಭಯಪಡುವ.

अथवेदृशो....कथमिवैतत् ದುಷ್ಯಂತ ವಿದೂಷಕರ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಿರುವ ಸಾನುಮತಿಯ ಕೆಲವು ಆಶಂಕೆಗಳಿಗೆ ಸಮಾಧಾನ ಸಿಕ್ಕಿದರೂ ಮತ್ತೆ ಕೆಲವು ಸಮಸ್ಯೆಗಳು ಏಳುತ್ತಲೇ ಇವೆ. ಅವಳಿಗೆ ಶಾಪ ವೃತ್ತಾಂತ ಗೊತ್ತಿಲ್ಲದಿರುವುದರಿಂದಲೇ ಈ ಸಂದೇಹ ಹುಟ್ಟಿದೆ.

उपालप्स्ये—ನಿಂದಿಸುತ್ತೇನೆ.

गृहीतो....उन्मत्तानाम्—ಇವನು ಹುಚ್ಚರ ದಾರಿ ಹಿಡಿದಂತಾಯಿತು.

ಪದ್ಯ—9 (ಅನ್ವಯ) बन्धुरकोमलाङ्गुलिं तं करं विहाय कथं नु अम्भसि निमग्नम् असि।

"ಸುಂದರವೂ ಕೋಮಲವೂ ಆದ ಬೆರಳುಗಳನ್ನುಳ್ಳ ಆ ಕೈಯನ್ನು ಬಿಟ್ಟು ಹೇಗೆತಾನೇ ನೀನು ನೀರಿನಲ್ಲಿ ಮುಳುಗಿದೆ?"

अचेतनं नाम गुणं न लक्षयेत् मयेव प्रिया कस्मादवधीरिता ? ಅಚೇತನವಾದ ವಸ್ತುವು ಗುಣವನ್ನು ಕಾಣದಿರಬಹುದು ; (ಆದರೆ) ಪ್ರಿಯೆಯು ನನ್ನಿಂದಲೇ ಏಕೆ ತಿರಸ್ಕರಿಸಲ್ಪಟ್ಟಳು ?

बुभुक्षया—भोक्तुम् इच्छा बुभुक्षा तया (ಇಚ್ಛಾರ್ಥಕ) ಹಸಿವಿನಿಂದ.

(ಪುಟ 68)

मधुरावस्थान....प्रवेशः—ಆಕೃತಿಯ ಸೌಂದರ್ಯದಿಂದ ಭಾವದ ಆವಿಷ್ಕರಣವು ಮತ್ತೂ ಚೆನ್ನಾಗಿದೆ.

स्खलति··· प्रदेशेषु—ಶರೀರದ ಅವಯವಗಳ ಉಬ್ಬು ತಗ್ಗಿನ ಭಾಗಗಳೂ ಗೋಚರ ವಾಗುವಷ್ಟು ಕೌಶಲದಿಂದ ಚಿತ್ರ ಬರೆಯಲ್ಪಟ್ಟಿದೆಯೆಂಬುದನ್ನು ಈ ಮಾತು ಸೂಚಿಸುತ್ತದೆ. ಸಾನುಮತಿಗೂ ಕೂಡ ಚಿತ್ರವನ್ನು ನೋಡಿದಾಗ ಅವಳೇ ಬಂದು ನಿಂತಂತೆ ಕಾಣಿಸುತ್ತದೆ. ಆದರೆ ದೊರೆಯ ದೃಷ್ಟಿಯಲ್ಲಿ—

ಪದ್ಯ—10 (ಅನ್ವಯ.) चित्रे यद्यत् न साधु स्यात् तत्तत् अन्यथा क्रियते। तथापि तस्याः लावण्यं किंचित् रेखया अन्वितम्।

ಚಿತ್ರದಲ್ಲಿ ಯಾವಯಾವುದು ಸರಿಯಿಲ್ಲವೋ ಅದೆಲ್ಲ ತಿದ್ದಲ್ಪಡುತ್ತದೆ; ಆದರೂ ಅವಳ ಲಾವಣ್ಯವು ರೇಖೆಗಳಿಂದ ಸ್ವಲ್ಪಮಾತ್ರ ಸೂಚಿಸಲ್ಪಡುತ್ತದೆ.

अनवलेपस्य—ನಿರಹಂಕಾರಸ್ವಭಾವಕ್ಕೂ; मोघदृष्टिः—ವ್ಯರ್ಥವಾದ ಕಣ್ಣುಳ್ಳವನು.

शिथिलबन्ध .... कुसुमेन — ಜಡೆ ಅಥವಾ ಗಂಟು ಸಡಿಲವಾಗಿ ಕಳಚಿಬಿದ ಹೂಗಳನ್ನುಳ್ಳ (केशान्तेन ಎಂಬುದರ ವಿ.) उद्भिन्नस्वेदबिन्दुना — ಹೊರ ಹೊಮ್ಮಿದ ಬೆವರಿನ ಹನಿಗಳಿಂದ ಕೂಡಿದ (वदनेन-ವಿ). वर्तिका—ಚಿತ್ರ ಬರೆಯುವ ಕುಂಚಿಕೆ.

(ಪುಟ 69)

ಪದ್ಯ—11 (ಅನ್ವಯ) पूर्वं साक्षात् उपगतां प्रियाम् अपहाय, चित्रार्पिताम् इमां पुनः बहुमन्यमानः सखे पथि निकामजलां स्रोतोवहाम् अतीत्य मृगतृष्णिकायाम् प्रणयवान् जातः॥

"ಮೊದಲು ಸಾಕ್ಷಾತ್ತಾಗಿ (ಕಣ್ಣೆದುರಿಗೆ) ಬಂದ ಪ್ರಿಯೆಯನ್ನು ಬಿಟ್ಟು, ಚಿತ್ರದಲ್ಲಿ ಬರೆದ ಇವಳನ್ನು ಬಹುವಾಗಿ ಮೆಚ್ಚುತ್ತ; ಸ್ನೇಹಿತನೇ, ದಾರಿಯಲ್ಲಿ ಸಿಕ್ಕಿದ ತುಂಬು ನೀರಿನ ಹೊಳೆಯನ್ನು ಬಿಟ್ಟು, ಬಿಸಿಲುಗುದುರೆಯಲ್ಲಿ ಪ್ರೀತಿಯುಳ್ಳವನಂತೆ ಆಗಿದ್ದೇನೆ".

स्रोतोवहां — ನದಿಯನ್ನು मृगतृष्णिकायाम् — ಮರೀಚಿಕೆ, ಬಿಸಿಲುಗುದುರೆ, एषोऽत्र....संक्रान्तः ಎಂದರೆ ವ್ಯರ್ಥವಾದ ಚಿಂತೆಯಲ್ಲಿ ಮಗ್ನನಾಗಿರುತ್ತಾನೆಂದು ತಾತ್ಪರ್ಯ. ಈ ಚಿಂತೆಯನ್ನು ಬಿಡಿಸಬೇಕೆಂದೇ ಅವನ ಮುಂದಿನ ಪ್ರಶ್ನೆ.

ಪದ್ಯ—12 (ಅನ್ವಯ) सैकतलीनहंसमिथुना स्रोतोवहा मालिनी कार्या। शाखालम्बितवल्कलस्य तरोः अधः कृष्णमृगस्य शृङ्गे वामनयनं कण्डूयमानं मृगीं निर्मातुम इच्छामि॥

"ಮರಳಿನ ಮೇಲೆ ಮಲಗಿದ ಹಂಸಗಳ ಜೋಡಿಯನ್ನುಳ್ಳ ಮಾಲಿನೀ ನದಿಯು (ಚಿತ್ರದಲ್ಲಿ) ಬರೆಯಲ್ಪಡಬೇಕು, ಆದರ ಸಮೀಪದಲ್ಲಿ ಜಿಂಕೆಗಳು ಕುಳಿತಿರುವ

ಹಿಮವಂತನ ಪವಿತ್ರವಾದ ತಪ್ಪಲುಗಳು (ಚಿತ್ರಿಸಲ್ಪಡಬೇಕು) ಕೊಂಬೆಗಳಲ್ಲಿ ತೂಗಾಡುತ್ತಿರುವ ನಾರುಡೆಗಳನ್ನುಳ್ಳ ಮರದ ಕೆಳಗೆ ಗಂಡು ಜಿಂಕೆಯು ಕೊಂಬಿಗೆ ಎಡಗಣ್ಣನ್ನು ಉಜ್ಜುತ್ತ ನವೆಯನ್ನು ಹೋಗಲಾಡಿಸಿಕೊಳ್ಳುತ್ತಿರುವ ಹೆಣ್ಣು ಜಿಂಕೆಯನ್ನೂ ನಿರ್ಮಿಸಲಿಚ್ಛಿಸುತ್ತೇನೆ ".

सैकत—ಮರಳು गौरीगुरोः—ಗೌರಿಯ ತಂದೆಯಾದ ಹಿಮವಂತನ;

एष दास्याः पुत्रः .... मधुकरः — ಮೊದಲನೆಯ ಅಂಕದಲ್ಲಿ ಬರುವ ಇಂಥದೇ ಸಂದರ್ಭವನ್ನೂ ಆಗ ದುಷ್ಯಂತನ ಮನಸ್ಸಿನಲ್ಲಿ ಉಂಟಾಗುವ ಭಾವನೆಯನ್ನೂ ಹೋಲಿಸಿ.

ಪದ್ಯ—13 (ಅನ್ವಯ) कुसुमनिषण्णा एषा मधुकरी अनुरक्ता सती तृषितापि भवन्तं प्रतिपालयति। त्वया विना मधु न पिबति खलु॥

ಹೂವಿನಲ್ಲಿ ಕುಳಿತ ಈ ಹೆಣ್ಣುದುಂಬಿಯು ಅನುರಕ್ತಳಾಗಿ ಬಾಯಾರಿದ್ದರೂ ನಿನಗಾಗಿ ಕಾದಿದ್ದಾಳೆ; ನೀನಿಲ್ಲದೇ ಅವಳು ಜೇನನ್ನು ಕುಡಿಯಳು.

ಆದುದರಿಂದ ನೀನು ನಿನ್ನ ಪ್ರಿಯೆಯ ಬಳಿಗೆ ಹೋಗತಕ್ಕದ್ದೆಂದು ತಾತ್ಪರ್ಯ; अभिजातं—ನಾಜೂಕಾದ ರೀತಿಯಲ್ಲಿ; ಒಳ್ಳೆಯಮಾತಿನಲ್ಲಿ; वामा—ಅವಿಧೇಯೆ ಹಟಮಾರಿ.

(ಪುಟ 70)

ಪದ್ಯ—14 (ಅನ್ವಯ) हे भ्रमर; अक्लिष्टबालतरुपल्लवलोभनीयं, रतोत्सवेषु मया सदयमेव पीतं प्रियायाः बिम्बाधरं स्पृशसि चेत् त्वां कमलोदरबन्धनस्थं कारयामि।

" ಎಲೈ ದುಂಬಿಯೇ; ಬಾಡದ ಎಳೆಯ ಚಿಗುರಿನಂತೆ ಸುಂದರವಾದ, ಮತ್ತು ಸುರತ ಕ್ರೀಡೆಗಳಲ್ಲಿ ನಾನು ನೋಯಿಸದೆ ಚುಂಬಿಸಿದ ನನ್ನ ಪ್ರಿಯೆಯ ತೊಂಡೆಯ ಹಣ್ಣಿನಂತಹ ಕೆಳತುಟಿಯನ್ನು ಮುಟ್ಟಿದ್ದೇ ಆದರೆ, ನಿನ್ನನ್ನು ಕಮಲದ ಒಳಗಿನ ಸೆರೆಮನೆಯಲ್ಲಿ ಬಂಧಿಸುತ್ತೇನೆ ".

एवं तीक्ष्णदण्डस्य—ಹೀಗೆ ಕಠಿನವಾದ ಶಿಕ್ಷೆಯನ್ನು ವಿಧಿಸುವವನಿಗೂ न भेष्यति — ಭಯಪಡುವುದಿಲ್ಲ. ईदृशवर्ण एव — ಇದೇ ಬಣ್ಣದವನಾಗಿ ಎಂದರೆ ಹುಚ್ಚನಾಗಿ.

भोः चित्रं खल्वेतत्—ಇದುವರೆಗೆ ಚಿತ್ರದಲ್ಲಿನ ಶಕುಂತಲೆಯನ್ನು ದೊರೆ ಮತ್ತು ವಿದೂಷಕ ಇಬ್ಬರೂ ಕೂಡ ಸಜೀವ ವ್ಯಕ್ತಿಯನ್ನಾಗಿ ಭಾವಿಸಿದ್ದರು.

अहमपि इदानीमवगतार्था—ಇದೇ ರೀತಿ ಸಾನುಮತಿಯೂ ಭಾವಿಸಿದ್ದು ' ಈಗ ನನಗೂ ತಿಳಿದಂತಾಯಿತು ' ಎನ್ನುವಳು.

पौरोभाग्यम्—ದೋಷದರ್ಶಿತ್ವವು. (दोषैकदृक्पुरोभागी–ಅಮರ)

ಪದ್ಯ—15 (ಅನ್ವಯ) साक्षादिव तन्मयेन हृदयेन दर्शनसुखमनुभवतः मे स्मृतिकारिणा त्वया कान्ता पुनरपि चित्रीकृता ।

" ಕಣ್ಣೆದುರಿಗೆ ಬಂದಳೋ ಎಂಬಂತೆ ತನ್ಮಯವಾದ ಹೃದಯದಿಂದ ದರ್ಶನದ ಸುಖವನ್ನು ಅನುಭವಿಸುತ್ತಿದ್ದ ನನಗೆ ನೆನಪನ್ನು ಕೊಟ್ಟ ನಿನ್ನಿಂದ ನನ್ನ ಪ್ರಿಯೆಯು ಮತ್ತೊಮ್ಮೆ ಚಿತ್ರವಾಗಿ ಮಾಡಲ್ಪಟ್ಟಿರುತ್ತಾಳೆ ".

पूर्वापर....मार्गः—ಮೊದಲು ಚಿತ್ರವನ್ನಾಗಿ ಭಾವಿಸುವುದು. ಅನಂತರ ಚಿತ್ರಿಸಿದ ವ್ಯಕ್ತಿಯನ್ನು ಜೀವಂತಳನ್ನಾಗಿ ಕಾಣುವುದು; ಪುನಃ ಅದು ಚಿತ್ರಮಾತ್ರವೆಂದರಿಯುವುದು; ಇದೇ ಪೂರ್ವಾಪರ ವಿರೋಧಿಯಾದ ಮಾರ್ಗ.

ಪದ್ಯ—16 (ಅನ್ವಯ) प्रजागरात् स्वप्ने तस्याः समागमः खिलीभूतः । चित्रगताम् एनां द्रष्टुमपि बाष्पः न ददाति ॥

" (ನಿದ್ರೆಯಿಲ್ಲದೆ) ಜಾಗರಣೆಯ ದೆಸೆಯಿಂದ ಸ್ವಪ್ನದಲ್ಲಿ ಅವಳ ಸಮಾಗಮ ವಿಲ್ಲವಾಯಿತು. ಚಿತ್ರದಲ್ಲಾದರೂ ಇವಳನ್ನು ನೋಡಲು, ಕಣ್ಣೀರು ಅವಕಾಶ ಕೊಡದು ".

प्रमार्जितम्—ಅಳಿಸಲ್ಪಟ್ಟಿತು. वर्तिकाकरण्डकम्—ಕುಂಚಗಳ ಪೆಟ್ಟಿಗೆಯನ್ನು

(ಪುಟ 71)

आत्मा निर्वाहितः ಓಡಿಬಂದೆ. अन्तःपुरकूटवागुरा—ಅಂತಃಪುರವೆಂಬ ಬಲೆಯಿಂದ

कार्योपरोधम्—ರಾಜಕಾರ್ಯಕ್ಕೆ ಅಡಚಣೆಯನ್ನು परिहरति ತಪ್ಪಿಸುತ್ತಾಳೆ.

अर्थजातस्य गणनाबहुलतया—ಎಣಿಸಬೇಕಾದ ಹಣ ಬಹಳವಿದ್ದ ಕಾರಣ सार्थवाह—ವರ್ತಕ; ವ್ಯಾಪಾರಿ. नौव्यसने—ಹಡಗಿನ ದುರಂತದಲ್ಲಿ.

(ಪುಟ 72)

आपन्नसत्वा—ಗರ್ಭಿಣಿ.

निर्वृत्तपुंसवना — ನಡೆಸಲ್ಪಟ್ಟ ಪುಂಸವನವನ್ನುಳ್ಳವಳು. ಪುಂಸವನವೆಂಬುದು ಗರ್ಭಿಣಿಗೆ ಮೂರನೆಯ ತಿಂಗಳಲ್ಲಿ ನಡೆಸುವ ಶಾಸ್ತ್ರೀಯ ಕರ್ಮ. (तृतीयस्य गर्भमासस्यादिमदशे पुंसवनस्य कालः—ಗೋಭಿಲ ಗೃಹ್ಯಸೂತ್ರ). पित्र्यं रिक्थम्—ತಂದೆಯ ಧನವನ್ನು.

ಪದ್ಯ—17 (ಅನ್ವಯ) प्रजाः येन येन स्निग्धेन बन्धुना वियुज्यन्ते, तासां पापादृते दुष्यन्तः सः सः इति घुष्यताम् ॥

" ಯಾವ ಯಾವ ಪ್ರೀತಿಯ ಬಂಧುವಿನ ವಿಯೋಗವನ್ನು ಪ್ರಜೆಗಳು ಹೊಂದುವರೋ, ಅಂತಹವರಿಗೆ ಪಾಪ ಸಂಬಂಧವನ್ನುಳಿದು ದುಷ್ಯಂತನು ಆಯಾ ಬಂಧುವಾಗಿರುವನೆಂದು ಘೋಷಿಸಲ್ಪಡಲಿ ".

ಎಂದರೆ ಪ್ರಕೃತದಲ್ಲಿ ಧನಮಿತ್ರನ ಮರಣದ ಕಾರಣ ಅವನ ಹೆಂಡತಿಗೆ ರಕ್ಷಕನಾದ ಪ್ರಿಯನ ವಿಯೋಗವುಂಟಾಗಿರುವುದರಿಂದ, ಇನ್ನೊಬ್ಬನ ಪತ್ನಿಯನ್ನು ಸ್ವೀಕರಿಸುವುದೆಂಬ ಪಾಪ ಸಂಬಂಧವಿಲ್ಲದೇ ಅವಳಿಗೆ ದುಷ್ಯಂತನೇ ಪತಿಯಂತೆ (ರಕ್ಷಕ) ಎಂಬುದೇ ಈ ಘೋಷಣೆಯ ತಾತ್ಪರ್ಯ. ಇದರಿಂದ ಅವನ ಆಸ್ತಿಯು ವಾರಸುದಾರರಿಲ್ಲದೆ ಸರ್ಕಾರಕ್ಕೆ ಸೇರಿಹೋಗುವುದನ್ನು ತಪ್ಪಿಸಿದಂತಾಯಿತು. पापादृते ಎಂದರೆ 'ಮರಣ ಹೊಂದಿದವನು ಪಾಪಿಯಲ್ಲದಿದ್ದರೆ' ಎಂದೂ ಅರ್ಥ ಹೇಳಲಾಗಿದೆ. ಆದರೆ 'ಪಾಪ ಸಂಬಂಧವಿಲ್ಲದಿದ್ದರೆ' ಎಂಬ ಮೊದಲಿನ ಅರ್ಥದಲ್ಲಿ ಈ ಎಲ್ಲ ಸನ್ನಿವೇಶಗಳೂ ಪ್ರಾಯಶಃ ಒಳಪಡುತ್ತವೆ.

प्रवृष्टमिव—ಮಳೆ ಬಿದ್ದಂತೆ.

उपस्थितश्रेयोऽवमानिनम्—ಒದಗಿಬಂದ ಶ್ರೇಯಸ್ಸನ್ನು ದೂರೀಕರಿಸಿದ, (ದುಷ್ಯಂತನ ಆಸ್ಥಾನಕ್ಕೆ ಬರುವ ವೇಳೆಗೆ ಶಕುಂತಲೆಯು ಗರ್ಭವತಿಯಾಗಿದ್ದಳೆಂಬ ಅಂಶ ಇಲ್ಲಿ ಗಮನಾರ್ಹ.)

(ಪುಟ 73)

पिण्डभाजः — ಪಿತೃಗಳು. संशयमारूढाः — ಇವನಿಗೆ ಸಂತತಿಯಿಲ್ಲವಲ್ಲ; ಮುಂದೆ ಪಿತೃಗಳ ತೃಪ್ತಿಗಾಗಿ ಪಿಂಡವನ್ನು ಕೊಡುವವರು ಯಾರು? ಎಂಬುದೇ ಅವರ ಸಂಶಯ. ಶ್ರಾದ್ಧದಲ್ಲಿ ಮೂರು ತಲೆಯವರೆಗೆ ಪಿತೃಗಳು 'ಪಿಂಡ' (ಮಂತ್ರ ಪೂರ್ವಕವಾಗಿ ಕೊಡಲ್ಪಟ್ಟ ಅನ್ನಾದಿಗಳ ಉಂಡೆ) ದಿಂದ ತೃಪ್ತಿಪಡಿಸಲ್ಪಡ ಬೇಕೆಂಬ ನಿಯಮ ಮತ್ತು ಆಚಾರವಿದೆ.

व्यवधानदोषेण—ತೆರೆಯ ದೋಷದಿಂದ; यज्ञभागोत्सुकाः—ಯಾಗದಲ್ಲಿ ಕೊಡುವ ಹವಿಸ್ಸನ್ನು ಪಡೆಯಲು ಕಾತರರಾಗಿರುವ;

प्रतिपालयितुम्—ಕಾದಿರಲು.

ಸಂತತಿ ವಿಚ್ಛೇದವನ್ನು ಪರಿಹರಿಸುವುದೇ ವಿವಾಹದ ಪರಮ ಪ್ರಯೋಜನವೇ ಹೊರತು ಕೇವಲ ಇಂದ್ರಿಯ ಸುಖೋಪಭೋಗವಲ್ಲವೆಂಬ ಅಂಶವು ಈ ಧನಮಿತ್ರನ ಪ್ರಸಂಗದಿಂದ ಧ್ವನಿತವಾಗಿದೆ.

आत्तगन्धः—ಆಕ್ರಮಿಸಲ್ಪಟ್ಟವನು; ಹಿಂಸಿಸಲ್ಪಟ್ಟವನು.

ಪದ್ಯ—18 (ಅನ್ವಯ) अहन्यहनि आत्मनः एव प्रमादस्खलितं ज्ञातुं न तावत् शक्यम्। प्रजासु कः केन पथा प्रयाति इति अशेषतः वेदितुं शक्तिः अस्ति॥

"ಪ್ರತಿದಿನ ಅಜ್ಞಾನದಿಂದ ನಡೆಯುತ್ತಿರುವ ನನ್ನ ತಪ್ಪುಗಳನ್ನೇ ಅರಿಯಲಸಾಧ್ಯ, ಹೀಗಿರುವಲ್ಲಿ ಪ್ರಜೆಗಳಲ್ಲಿ ಯಾರು ಯಾವ ದಾರಿಯಲ್ಲಿ ನಡೆಯುತ್ತಿದ್ದಾರೆಂದು ತಿಳಿಯಲು ಶಕ್ತಿಯಿದೆಯೇ?"

ಹೀಗೆ ತಪ್ಪುದಾರಿಯಲ್ಲಿ ನಡೆಯುವುದರಿಂದ ಭೂತಾದಿಗಳ ಚೇಷ್ಟೆ ಹೆಚ್ಚುವು ದೆಂಬ ನಂಬಿಕೆಯಿದೆ.

(ಪುಟ 74)

प्रत्यवनतशिरोधरं — ಕತ್ತನ್ನು ಬಗ್ಗಿಸಿ इक्षुमिव — ಕಬ್ಬನ್ನು ಮುರಿಯುವಂತೆ त्रिभङ्गम— ಮೂರು ತಂಡಾಗಿ.

हस्तावापः—ಕೈಗಳಿಗೆ ಹಾಕಿಕೊಳ್ಳುವ ಚೀಲ. शरासनम—ಬಿಲ್ಲು.

ಪದ್ಯ—19 (ಅನ್ವಯ) एषः अभिनवकण्ठशोणितार्थी शार्दूलः चेष्टमानम् पशुमिव त्वां हन्मि। इदानीं आर्तानां भयम् अपनेतुं आत्तधन्वा दुष्यन्तः तव शरणं भवतु।

" ಕುತ್ತಿಗೆಯ ಹೊಸರಕ್ತವನ್ನು ಬಯಸುವ ಹುಲಿಯು ಹೋರಾಡುತ್ತಿರುವ ಮೃಗವನ್ನು ಕೊಲ್ಲುವಂತೆ ನಾನು ನಿನ್ನನ್ನು ಕೊಲ್ಲುತ್ತೇನೆ. ದುಃಖಿತರ ಭಯವನ್ನು ಹೋಗಲಾಡಿಸುವುದಕ್ಕಾಗಿ ಬಿಲ್ಲನ್ನು ಹಿಡಿದಿರುವ ದುಷ್ಯಂತನು ಈಗ ನಿನಗೆ ಆಶ್ರಯನಾಗಲಿ ".

चेष्टमानम् — ಕುಚೇಷ್ಟೆಯಲ್ಲಿ ತೊಡಗಿರುವ ನಿನ್ನನ್ನು ಮತ್ತು ಹೋರಾಡುವ ಮೃಗವನ್ನು ಎಂದು ಎರಡಕ್ಕೂ ಅನ್ವಯಿಸುತ್ತದೆ. ಹೀಗೆಯೇ अभि....तार्थी ಎಂಬ ವಿಶೇಷಣ एषः ಮತ್ತು शार्दूलः ಎಂಬ ಎರಡಕ್ಕೂ ಹೊಂದುತ್ತದೆ.

कुणपाशनः—ರಾಕ್ಷಸ; ಹೆಣವನ್ನು ತಿನ್ನುವವನು.

बिडालगृहीतो मूषक इव—ಬೆಕ್ಕಿನ ಕೈಗೆ ಸಿಕ್ಕಿದ ಇಲಿಯಂತೆ.

तिरस्करिणीगर्वित—ಅದೃಶ್ಯನಾಗುವ ವಿದ್ಯೆಯಿಂದ ಗರ್ವಿತನೇ;

(ಪುಟ 75)

ಪದ್ಯ—20 (ಅನ್ವಯ) यः वध्यं त्वां हनिष्यति रक्ष्यम् द्विजं रक्षिष्यति। हंसः क्षीरं आदत्ते तन्मिश्राः अपः वर्जयति॥

" ಯಾವುದು ಕೊಲ್ಲಲು ಅರ್ಹನಾದ ನಿನ್ನನ್ನು ಕೊಲ್ಲುತ್ತದೋ ಅದು ರಕ್ಷಣೆಗೆ ಅರ್ಹನಾದ ಬ್ರಾಹ್ಮಣನನ್ನು ರಕ್ಷಿಸುತ್ತದೆ. ಹಂಸವು ಹಾಲನ್ನು ಮಾತ್ರ ಕುಡಿದು ಅದರೊಡನೆ ಸೇರಿರುವ ನೀರನ್ನು ಬಿಡುತ್ತದೆ".

ಪದ್ಯ—21 (ಅನ್ವಯ) हरिणा तव असुराः शरव्यं कृताः। इदं शरासनं तेषु विकृष्यताम्। सुहृज्जने सतां प्रसादसौम्यानि चक्षूंषि पतन्ति, दारुणाः शराः न॥

"ಇಂದ್ರನಿಂದ ಅಸುರರು ನಿನ್ನ (ಬಾಣಗಳಿಗೆ) ಗುರಿಯಾಗಿ ಮಾಡಲ್ಪಟ್ಟಿರುತ್ತಾರೆ. ಅವರ ಮೇಲೆ ಈ ಬಿಲ್ಲು ಎಳೆಯಲ್ಪಡಲಿ ಸ್ನೇಹಿತರ ಮೇಲೆ ಸತ್ಪುರುಷರ ಪ್ರಸನ್ನವಾದ ಸೌಮ್ಯದೃಷ್ಟಿ ಬೀಳುತ್ತದೆಯೇ ಹೊರತು ಉಗ್ರವಾದ ಬಾಣಗಳಲ್ಲ".

शरव्यम्—शृणातीति शरुः तस्मै हितं शरव्यम्, (ಬಾಣಗಳಿಗೆ) ಲಕ್ಷ್ಯ ಅಥವಾ ಗುರಿ.

इष्टिपशुरिव मारितः—इष्टिपशुमारं—(ಅವ್ಯಯ ಕ್ರಿಯಾವಿಶೇಷಣ) 'उपमाने कर्मणि च' ಎಂಬ ಸೂತ್ರಾನುಸಾರ ಉಪಮಾನವನ್ನು ಕರ್ಮಪದವನ್ನಾಗಿ ಪ್ರಯೋಗಿಸಿರುವುದರಿಂದ ಧಾತುವಿಗೆ णमुल् (अम्) ಪ್ರತ್ಯಯ ಸೇರಿಸಿದೆ.... ಯಾಗದಲ್ಲಿ ಪಶುವನ್ನು ಕತ್ತರಿಸಿದಂತೆ;

कालनेमिप्रसूतिः—ಕಾಲನೇಮಿಯ ಸಂತತಿಗೆ ಸೇರಿದ ; ಹಿರಣ್ಯಕಶಿಪುವಿನ ಮಗನಾದ ಕಾಲನೇಮಿಗೆ ನೂರು ತಲೆಗಳೂ ನೂರು ತೋಳುಗಳೂ ಇದ್ದುವೆಂದು ಪೌರಾಣಿಕ ಕಥೆಯಿದೆ.

ಪದ್ಯ—22 (ಅನ್ವಯ:) ते सख्युः शतक्रतोः सः अजय्यः किल। रणशिरसि त्वं तस्य निहन्ता स्मृतः। यत् नैशं तिमिरं सप्तसप्तिः उच्छेत्तुं न प्रभवति तत् चन्द्रः अपाकरोति ॥

"ನಿನ್ನ ಮಿತ್ರನಾದ ಇಂದ್ರನಿಗೆ ಅವನನ್ನು ಜಯಿಸಲು ಸಾಧ್ಯವಿಲ್ಲ; ಯುದ್ಧಭೂಮಿಯಲ್ಲಿ ನೀನೇ ಅವನ ಹಂತಕನಾಗಿ ಸ್ಮರಿಸಲ್ಪಟ್ಟಿದ್ದೀಯೆ. ಯಾವ ರಾತ್ರಿಯ ಕತ್ತಲೆಯನ್ನು ಸೂರ್ಯನು ನಾಶಗೊಳಿಸಲು ಸಮರ್ಥನಾಗುವುದಿಲ್ಲವೋ ಅದನ್ನು ಚಂದ್ರನು ಹೋಗಲಾಡಿಸುತ್ತಾನೆ."

अजय्यः जेतुं शक्यः जय्यः न जय्यः 'क्षय्यजय्यौ शक्यार्थे' ಎಂಬ ಸೂತ್ರಾನುಸಾರ जि ಧಾತುವಿಗೆ 'ಶಕ್ಯ' ಎಂಬ ಅರ್ಥದಲ್ಲಿ यत् (य) ಪ್ರತ್ಯಯಸೇರಿಸಿ ನಿಷ್ಪತ್ತಿಮಾಡಿದೆ. निशायाः इदं=नैशम् ರಾತ್ರಿಯ उच्छेत्तुम्—ತೊಡೆದು ಹಾಕಲು किंचिन्निमित्तादपि....कृतवानस्मि—ದೊರೆಯ ವಿಲಾಪದ ಪ್ರಸಂಗಗಳಿಂದ ದೀರ್ಘವಾಗಿ ಬೆಳೆದು ಬಂದ ಆರನೆಯ ಅಂಕದ ಕಥಾಂಶದಲ್ಲಿ, ವಿದೂಷಕನಿಗೆ ಉಂಟಾದ ಈ ಭೂತಗ್ರಹಣ ಪ್ರಸಂಗವು ನಾಟಕೀಯತೆಯನ್ನುಂಟುಮಾಡುವುದಲ್ಲದೆ ಸೋಪಪತ್ತಿಕವೂ ಆಗಿದೆಯೆಂಬುದು ಗಮನಾರ್ಹ.

कोपयितुम्—ಕೋಪವನ್ನುಂಟುಮಾಡಲು.

(ಪುಟ 76)

ಪದ್ಯ—23 (ಅನ್ವಯ) अग्निः चलितेन्धनः ज्वलति; पन्नगः विप्रकृतः फणां कुरुते। जनः प्रायः क्षोभात् स्वं महिमानं प्रतिपद्यते ॥

"ಕಟ್ಟಿಗೆಯನ್ನು ತಿರುಗಿಸಿಡುತ್ತಿದ್ದರೆ ಬೆಂಕಿ ಜ್ವಲಿಸುತ್ತದೆ. ಕೆಣಕಿದಾಗ ಹಾವು ಹೆಡೆ ಬಿಡುತ್ತದೆ. ಪ್ರತಿಯೊಬ್ಬನೂ ಸಾಮಾನ್ಯವಾಗಿ ಉದ್ರೇಕ ಹೊಂದಿದಾಗ ತನ್ನ ನಿಜವಾದ ಪರಾಕ್ರಮವನ್ನು ಪ್ರದರ್ಶಿಸುತ್ತಾನೆ."

ಚಲಿತೇಂಧನಃ—ಕಟ್ಟಿಗೆಯನ್ನು ಉರಿಸುವಾಗ ಸ್ವಲ್ಪಹೊತ್ತು ಉರಿದ ಮೇಲೆ ಅದರಲ್ಲಿನ ಬೂದಿಯನ್ನು ಕೊಡವಿ ತಿರುಗಿಸಿ ಇಡುವುದರಿಂದ ಇನ್ನೊಂದು ಕಡೆ ಉರಿಯಲು ಅನುಕೂಲವಾಗುವುದು ಅನುಭವಸಿದ್ಧ. ಹಾವಿನ ಉದಾಹರಣೆ ಸುಸ್ಪಷ್ಟ, ಹಾಗೆಯೇ ಪ್ರತಿಯೊಬ್ಬನೂ ತನ್ನ ಉತ್ಕೃಷ್ಟ ಪೌರುಷವನ್ನು ಪ್ರಯೋಗಿಸ ಬೇಕಾದರೆ ಪ್ರತಿಪಕ್ಷದಿಂದ ಸಾಕಷ್ಟು ಪ್ರಚೋದನೆ ಬೇಕಾಗುತ್ತದೆಯೆಂಬುದೇ ತಾತ್ಪರ್ಯ.

परिगतार्थं कृत्वा—ಈ ಸಂದರ್ಭದ ಅರ್ಥವನ್ನು ತಿಳಿಸಿ.

ಪದ್ಯ—24 (ಅನ್ವಯ) त्वन्मतिः केवला तावत् प्रजाः परिपालयतु । अधिज्यम् इदं धनुः अन्यस्मिन् कर्मणि व्यापृतम् ।

"ನಿನ್ನ ಬುದ್ಧಿಶಕ್ತಿಯೇ ಸದ್ಯಕ್ಕೆ ಪ್ರಜೆಗಳನ್ನು ಕಾಪಾಡಲಿ ಹೆದೆಯೇರಿಸಿದ ಈ ಬಿಲ್ಲು ಬೇರೆ ಕೆಲಸದಲ್ಲಿ ನಿರತವಾಗಿದೆ."

अधिज्यम्—ಹೆದೆ ಬಿಗಿದ ;

ಈ ಅಂಕದ ಕಥಾವಸ್ತುವು ಮಿಕ್ಕೆಲ್ಲ ಅಂಕಗಳಿಗಿಂತ ದೊಡ್ಡದಾಗಿದ್ದರೂ ಪೂರ್ವಾಪರ ಸಮನ್ವಯ ರೂಪವಾದ ಪ್ರಯೋಜನವನ್ನು ಹೊಂದಿದೆ. ಹಿಂದಿನ ಅಂಕಗಳಲ್ಲಿನ ಕೆಲವು ಸನ್ನಿವೇಶಗಳು ಮುಖ್ಯ ಕಥಾವಸ್ತುವಿನೊಡನೆ ಸೋಪ ಪತ್ತಿಕವಾಗಿ ಹೊಂದಿಕೊಳ್ಳುವಂತಾಗಿದೆ. ಸಾನುಮತಿಯ ಪ್ರಸಂಗದಿಂದ ದುಷ್ಯಂತನ ಪಶ್ಚಾತ್ತಾಪವು ಶಕುಂತಲೆಗೆ ತಿಳಿಯಲು ಅವಕಾಶವಾಗುತ್ತದೆ. ಮತ್ತು ಇದರಿಂದ ಮುಂದಿನ ಅಂಕದಲ್ಲಿ ಕಂಡು ಬರುವ ಪುನಸ್ಸಮಾಗಮಕ್ಕೆ ಉಚಿತವಾದ ಪುಷ್ಟಿಯನ್ನು ಕೊಡುವಂತೆ ಕವಿಯು ಇಲ್ಲಿ ತನ್ನ ನೆಚ್ಚಿನ ವಿಪ್ರಲಂಭ ಶೃಂಗಾರದ ಹೊನಲನ್ನೇ ಹರಿಸಿದ್ದಾನೆ. ಕಾಳಿದಾಸನು ಈ ಅಭಿಜ್ಞಾನ ಶಾಕುಂತಲವನ್ನು ಐದನೆಯ ಅಂಕಕ್ಕೇ ಮುಗಿಸಿ 'ದುರಂತ'ವನ್ನಾಗಿ ಮಾಡಿದ್ದರೆ ಚೆನ್ನಾಗಿತ್ತೆಂಬ ಅಭಿಪ್ರಾಯವೊಂದಿದೆ. ಆದರೆ ಇದು ಕವಿಯ ಆಶಯವಾಗಿರಲಿಲ್ಲವೆಂಬ ಕಾರಣ ಅನೇಕರು ಈ ವಾದವನ್ನು ಒಪ್ಪುವುದಿಲ್ಲ. 'ದುರಂತ' ನಾಟಕಗಳಲ್ಲೂ ಸಹ ಕೊನೆಯಲ್ಲಿ ಉಂಟಾಗಬೇಕಾದ ಒಂದು ರೀತಿಯ ಸಮಾಧಾನ (Consolation) ಇಲ್ಲಿನ ನಾಯಕ ನಾಯಿಕೆಯರ ಅನ್ಯಾಯವಾದ ವಿಚ್ಛೇದದಿಂದ ದೊರಕುತ್ತಿರಲಿಲ್ಲವೆಂದೂ, ಯಾವ ಶಕುಂತಲೆಯ ದುರ್ದೈವದ ಪರಿಹಾರಕ್ಕಾಗಿ ಮಹರ್ಷಿ ಕಣ್ವರು ಮೊದಲಿಂದ ಶ್ರಮಿಸುತ್ತಿದ್ದರೆಂದು ಹೇಳಲಾಗಿದೆಯೋ ಅದೆಲ್ಲ ವ್ಯರ್ಥವಾಗುತ್ತಿತ್ತೆಂದೂ ಪ್ರೇಮದ ಪರಾಕಾಷ್ಠೆಯಲ್ಲಿನ

ಅನ್ಯಮನಸ್ಕತೆಯಿಂದ ಸಂಭವಿಸಿದ ಅತಿಥಿಯ ಅನಾದರ ರೂಪವಾದ ಕರ್ತವ್ಯಲೋಪಕ್ಕೆ ಪ್ರಣಯಿಗಳಿಗೆ ಶಾಶ್ವತವಾದ ವಿಯೋಗವು ಅತಿ ಹೆಚ್ಚಿನ ಶಿಕ್ಷೆಯಾಗಿ ಪರಿಣಮಿಸುತ್ತಿತ್ತೆಂಬುದೇ ಮೊದಲಾದ ಅನೇಕ ಕಾರಣಗಳಿಂದ ಶಾಕುಂತಲವು ವಿಷಾದಾಂತವಾಗಿದ್ದರೆ ಹೆಚ್ಚು ಸುಂದರವಾಗುತ್ತಿರಲಿಲ್ಲವೆಂದು ಭಾವಿಸಲಾಗಿದೆ. ಇದಲ್ಲದೆ 'ತರುಣ ವತ್ಸರದ ಪುಷ್ಪ' ರೂಪವಾದ 'ಮರ್ತ್ಯ ಪ್ರೇಮ'ವು 'ಪರಿಣತಿಯ ಫಲ' ರೂಪವಾದ 'ದಿವ್ಯ ಪ್ರೇಮ'ವಾಗುವುದನ್ನು ರೂಪಿಸುವುದೇ ಕಾಳಿದಾಸನ ಮುಖ್ಯವಾದ ಆಶಯವಾಗಿತ್ತೆಂಬ ದೃಷ್ಟಿಯಿಂದ ಆರು ಮತ್ತು ಏಳನೆಯ ಅಂಕಗಳ ಕಥಾವಸ್ತುವು ಮೊದಲಿನ ಕಥಾಭಾಗಕ್ಕೆ ಆವಶ್ಯಕವಷ್ಟೇ ಅಲ್ಲ, ಅತ್ಯಂತ ಉಚಿತವೂ ಸುಂದರವೂ ಆದ ಪೂರಕವಾಗಿದೆಯೆಂದು ಅಭಿಪ್ರಾಯಪಡಲಾಗಿದೆ.

# ಏಳನೆಯ ಅಂಕ

[ಕಾಲ—ಈ ಅಂಕದ ಘಟನೆಗಳು ಒಂದೇ ದಿನದಲ್ಲಿ ನಡೆಯುತ್ತವೆ. ಹಿಂದಿನ ಅಂಕದ ಕೊನೆಯಲ್ಲಿ ಇಂದ್ರನ ಆಹ್ವಾನವನ್ನಂಗೀಕರಿಸಿ ದೇವಲೋಕಕ್ಕೆ ತೆರಳಿದ ದುಷ್ಯಂತನು ಅಲ್ಲಿ ರಾಕ್ಷಸರನ್ನೆಲ್ಲ ಸೋಲಿಸಿ, ಇಂದ್ರನಿಂದ ಸೂಕ್ತಸತ್ಕಾರವನ್ನು ಪಡೆದು ಮೂರನೆಯ ದಿನ ಹಿಂತಿರುಗಿರಬೇಕೆಂಬ ('ಪೂರ್ವೇದ್ಯುರ್ದಿವಮಧಿರೋಹತಾ' ಎಂಬ ಮಾತನ್ನು ಗಮನಿಸಿ) ಆಧಾರದ ಮೇಲೆ ಈ ಅಂಕದ ಘಟನೆಗಳು ಮೂರನೆಯ ದಿವಸವೇ ನಡೆದಿರಬೇಕೆಂದು ತೋರುತ್ತದೆ.]

ಕಾಲನೇಮಿಯ ವಂಶದವರೆಂದು ಹೇಳಲಾದ ದುರ್ಜಯರೆಂಬ ರಾಕ್ಷಸ ಗಣವನ್ನು ಯುದ್ಧದಲ್ಲಿ ಸೋಲಿಸಿ, ದುಷ್ಯಂತನು ಇಂದ್ರನ ಆತಿಥ್ಯ ಸತ್ಕಾರಗಳನ್ನು ಸ್ವೀಕರಿಸಿ ಮಾತಲಿಯೊಡನೆ ಹಿಂತಿರುಗಿ ಬರುತ್ತ ಹೇಮಕೂಟವೆಂಬ ಕಿಂಪುರುಷ ಪರ್ವತಕ್ಕೆ ಬರುವನು. ಆ ಪ್ರದೇಶಕ್ಕೆ ಬಂದೊಡನೆಯೇ ದುಷ್ಯಂತನಿಗೆ ಏನೋ ಒಂದು ಬಗೆಯ ಆನಂದವುಂಟಾಗುವುದು. ಆ ಪ್ರದೇಶದ ವೈಶಿಷ್ಟ್ಯ ಅಂತಹುದು. ಅಲ್ಲಿ ಸುರಾಸುರಗುರುವಾದ ಮಾರೀಚನ ಆಶ್ರಮವಿದೆಯೆಂದು ತಿಳಿದು ಮುನಿಗೆ ನಮಸ್ಕರಿಸಿ ಆಶೀರ್ವಾದವನ್ನು ಪಡೆಯ ಬಯಸುವನು. ಋಷಿಗಳ ದರ್ಶನಕ್ಕೆ ಕಾಲಸರಿಯಾಗಿದೆಯೋ ಇಲ್ಲವೋ ಎಂಬುದನ್ನು ತಿಳಿಯುವುದಕ್ಕಾಗಿ ಮಾತಲಿ ಅತ್ತ ಹೋಗುವನು. ಆಗ ದುಷ್ಯಂತನ ಬಲತೋಳು ಅದುರುವುದು ಇದೇಕೆಂದು. ಯೋಚಿಸುವಷ್ಟರಲ್ಲಿ ಸಿಂಹದ ಮರಿಯೊಂದನ್ನು ಹಿಡಿದು ಜಗ್ಗಿಸಿ ಬಾಯಿಬಿಡಿಸಲು ಪ್ರಯತ್ನಿಸುತ್ತಿದ್ದ ಬಾಲಕನೊಡನೆ ಮಾತನಾಡುತ್ತ ಇಬ್ಬರು ತಾಪಸಿಯರು ದೃಷ್ಟಿಗೆ ಬೀಳುವರು. ಬಾಲಕನ ವಿಷಯದಲ್ಲಿ ದೊರೆಗೆ ಅನಿರ್ವಚನೀಯವಾದ ವಾತ್ಸಲ್ಯ ಹುಟ್ಟುವುದು. ಸಿಂಹದ ಮರಿಯನ್ನು ಈ ತುಂಟನ ಹಿಂಸೆಯಿಂದ ಬಿಡಿಸಿ ಇವನ ಆಟಕ್ಕಾಗಿ ಪರ್ಣಶಾಲೆಯಿಂದ ಮಣ್ಣಿನ ನವಿಲನ್ನು ತರಿಸುವ ಪ್ರಸಂಗದಲ್ಲಿ ನಡೆದ ಮಾತುಕತೆಗಳಿಂದ ಬಾಲಕನು ಪುರುವಂಶಕ್ಕೆ ಸೇರಿದವನೆಂದೂ ಇವನ ತಂದೆ ಧರ್ಮಪತ್ನಿಯನ್ನು ಪರಿತ್ಯಾಗ ಮಾಡಿದವನೆಂದೂ ಕೆಲವು ಅಂಶಗಳು ತಿಳಿದು ಬರುತ್ತವೆ. ಬಾಲಕನ ಅಂಗೈಯಲ್ಲಿನ ಚಕ್ರವರ್ತಿ ಲಕ್ಷಣಗಳು ದುಷ್ಯಂತನ ದೃಷ್ಟಿಗೆ ಬೀಳುತ್ತವೆ. ಇವನನ್ನು ದುಷ್ಯಂತನು ಎತ್ತಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡಾಗ ಅಮಿತವಾದ ಆನಂದವಾಗುತ್ತದೆ. ಆಗ ತಾಪಸಿಯರು ಬಾಲಕನಿಗೂ ದುಷ್ಯಂತನಿಗೂ ಇದ್ದ ಆಕೃತಿ ಸಾಮ್ಯವನ್ನು ಗಮನಿಸಿ ಆಶ್ಚರ್ಯಪಡುವರು. ಕಡೆಗೆ ನವಿಲಿನ ಸೌಂದರ್ಯದ ಕಡೆಗೆ ಬಾಲಕನ ಗಮನವನ್ನು ಸೆಳೆಯಬೇಕೆಂದು 'ಶಕುಂತಲಾವಣ್ಯಂ ಪಶ್ಯ' ಎಂದು ಹೇಳಿದಾಗ ಆ ಬಾಲಕ 'ಎಲ್ಲಿ ನನ್ನ ಅಮ್ಮ' ಎಂದು ಕೇಳುವನು. ಹೀಗೆ

ದುಷ್ಯಂತನಿಗೆ ಈ ಬಾಲಕನು ತನ್ನ ಮಗನೇ ಆಗಿರಬೇಕೆಂಬ ಊಹೆ ಪ್ರಬಲ ವಾಗುತ್ತ ಬಂದರೂ, ಒಂದೇ ಹೆಸರಿನ ಅನೇಕ ವ್ಯಕ್ತಿಗಳಿರಬಹುದೆಂಬ ಸಂದೇಹವೂ ಮುಂದುವರಿಯುವುದು. ಕಡೆಗೆ ತಂದೆತಾಯಿಗಳನ್ನು ಬಿಟ್ಟು ಉಳಿದವರು ಮುಟ್ಟಿದಾಗ ಸರ್ಪವಾಗಿ ಕಚ್ಚಬೇಕಾದ ಬಾಲಕನ ರಕ್ಷೆಯು ತಾಯಿತಿಯನ್ನು ದುಷ್ಯಂತನು ಮುಟ್ಟಿದಾಗ ಈ ರೀತಿಯ ಪರಿಣಾಮ ಆಗದೇ ಇರಲಾಗಿ ದುಷ್ಯಂತನಿಗೆ ತಾನೇ ತಂದೆಯೆಂಬ ಧೈರ್ಯಬಂದು ಪುತ್ರನೊಡನೆ ಶಕುಂತಲೆಯನ್ನು ಕಾಣಲು ಹೊರಡುವನು. ಈ ವೇಳೆಗೆ ತಾಪಸಿಯರು ಇಲ್ಲಿ ನಡೆದ ಆಶ್ಚರ್ಯವನ್ನು ಶಕುಂತಲೆಗೆ ತಿಳಿಸಿರುವರು. ಹೀಗೆ ಪವಿತ್ರವಾದ ಮಾರೀಚಾಶ್ರಮದ ಶಾಂತವಾತಾವರಣದಲ್ಲಿ ದುಷ್ಯಂತನಿಗೆ ಪುತ್ರಸಮಾಗಮದ ಮೂಲಕವೇ ಪ್ರಿಯೆಯೊಡನೆ ಪುನಸ್ಸಮಾಗಮವೇರ್ಪಡುವುದು ಗಮನಾರ್ಹ ವಾಗಿದೆ. ಮಾತಲಿಯೊಡನೆ ಎಲ್ಲರಿಗೂ ಋಷಿವರ್ಯರ ದರ್ಶನಾಶೀರ್ವಾದಗಳು ದೊರಕಿದಾಗ ಅವರು ಜ್ಞಾನದೃಷ್ಟಿಯಿಂದ ತಿಳಿದು ದುಷ್ಯಂತನಲ್ಲಾಗಿದ್ದ ಮನೋವಿಕಾರಕ್ಕೆ ದುರ್ವಾಸರ ಶಾಪವೇ ಕಾರಣವಾಗಿತ್ತೆಂಬ ಅಂಶವನ್ನು ವ್ಯಕ್ತಪಡಿಸುವರು. ಆಗ ಪ್ರಿಯಪ್ರೇಯಸಿಯರಲ್ಲಿ ಪೂರ್ಣವಾದ ಸಮಾಧಾನ ಮೂಡಿ ನಾಟಕವು ಮಂಗಳಕರವಾದ ಭರತವಾಕ್ಯದೊಡನೆ ಮುಗಿಯುವುದು.

(ಪುಟ 77)

मघवतः—ಇಂದ್ರನ ; सत्क्रिया....वात्मानं समर्थये—ಇಂದ್ರನು ಮಾಡಿದ ಸತ್ಕಾರ ಅಷ್ಟು ಅಧಿಕವಾಗಿತ್ತೆಂದು ತಾತ್ಪರ್ಯ.

उभयमप्यपरितोषं—न विद्यते परितोषः यत्र तत्—अपरितोषम्. ಇಬ್ಬರನ್ನೂ ತೃಪ್ತಿವಿಹೀನರನ್ನಾಗಿ (ತಿಳಿಯುತ್ತೇನೆ) ಅಥವಾ ಎರಡನ್ನೂ ತೃಪ್ತಿವಿಹೀನವನ್ನಾಗಿ ತಿಳಿಯುತ್ತೇನೆ. ನಿನ್ನ ಸೇವೆಗೆ ಇಂದ್ರನ ಸತ್ಕಾರ ಹೆಚ್ಚೆಂದು ನೀನು ಭಾವಿಸಿದರೆ ಅವನ ಸತ್ಕಾರಕ್ಕಿಂತ ನಿನ್ನ ಉಪಕಾರ ಬಹಳ ಹೆಚ್ಚಿನದೆಂದು ಇಂದ್ರನು ಭಾವಿಸು ವುದರಿಂದ ಇಬ್ಬರಿಗೂ ಅತೃಪ್ತಿಯೇ ಎಂದು ತಾತ್ಪರ್ಯ.

ಪದ್ಯ—1 (ಅನ್ವಯ) भवान् मरुत्वतः प्रतिपत्त्या प्रथमोपकृतं लघु मन्यते । भवतः अवदानविस्मितः सोऽपि सत्क्रियागुणान् न गणयति ॥

" ಇಂದ್ರನು ತೋರಿಸಿದ ಗೌರವದಿಂದ ನೀನು ನಿನ್ನ ಮೊದಲಿನ ಉಪಕಾರವನ್ನು ಅಲ್ಪವನ್ನಾಗಿ ತಿಳಿದಿದ್ದೀಯೆ. ನಿನ್ನ ಪರಾಕ್ರಮದಿಂದ ವಿಸ್ಮಿತವಾದ ಅವನೂ ಸಹ ತನ್ನ ಸತ್ಕಾರದ ಮಹತ್ವವನ್ನು ಎಣಿಸುವುದಿಲ್ಲ ".

प्रतिपत्त्या—ಗೌರವದಿಂದ ; अवदानेन विस्मितः—ಪರಾಕ್ರಮದಿಂದ ವಿಸ್ಮಿತನಾದ ; मनोरथानामप्यभूमिः—ಆಶೆಗೂ ಮೀರಿದ್ದು.

ಇಂದ್ರನ ಸಾರಥಿಯಾದ ಮಾತಲಿಯು ದುಷ್ಯಂತನ ಹಿರಿಮೆಯನ್ನು ಕೊಂಡಾಡುತ್ತಾ 'ನೀನು ಇಂದ್ರನಿಂದ ಯಾವ ಗೌರವಕ್ಕೆ ತಾನೆ ಅರ್ಹನಲ್ಲ?' ಎಂದು ಹೇಳಿದರೆ, ದೊರೆಯು 'ಹೇಗೂ ಇಂದ್ರನ ಮಹಿಮೆಯೇ ಸ್ತುತ್ಯವಾದದ್ದು' ಎಂದು ಅವನನ್ನೇ ಹೊಗಳುವನು.

ಪದ್ಯ—2 (ಅನ್ವಯ) यत् नियोज्याः महत्स्वपि कर्मसु सिध्यन्ति तं ईश्वराणाम् संभावनागुणं अवेहि। सहस्रकिरणः तं धुरि नाकरिष्यत चेत् अरुणः तमसां विभेत्ता किं वा अभविष्यत् ॥

"ಸೇವಕರು ತಮಗೆ ವಹಿಸಲ್ಪಟ್ಟ ದೊಡ್ಡ ಕರ್ತವ್ಯಗಳಲ್ಲಿ ಸಿದ್ಧಿಯನ್ನು ಪಡೆಯುವುದು ಒಡೆಯರ ಗೌರವದ ಗುಣದಿಂದಲೇ ಎಂದು ತಿಳಿ. ಸೂರ್ಯನು ಅವನನ್ನು (ಸಾರಥಿಯನ್ನಾಗಿ) ಮುಂದಿಟ್ಟುಕೊಳ್ಳದಿದ್ದರೆ ಅರುಣನು ಕತ್ತಲೆಯನ್ನು ನಾಶಗೊಳಿಸಲು ಸಮರ್ಥನಾಗುತ್ತಿದ್ದನೇ ?"

नियोज्याः—ಕೆಲಸಮಾಡುವುದಕ್ಕಾಗಿ ನೇಮಿಸಲ್ಪಡುವ ಸೇವಕರು.

संभावनागुणं—ಸೇವಕರ ಮೇಲಿಡುವ ಗೌರವದ ಗುಣವನ್ನಾಗಿ.

धुरि—ಮುಂದೆ, ರಥಾಗ್ರದಲ್ಲಿ;

स्वाधिकारभूमौ—ನಿನ್ನ ಅಧಿಕಾರಕ್ಕೆ ಒಳಪಟ್ಟ ಭೂಮಿಯಲ್ಲಿ.

वेगावतरणात्—ವೇಗದಿಂದ ಇಳಿಯುತ್ತಿರುವ ಕಾರಣ.

ಪದ್ಯ—3 (ಅನ್ವಯ) मेदिनी उन्मज्जतां शैलानां शिखरात् अवरोहतीव। स्कन्धोदयात् पादपाः पर्णाभ्यान्तरलीनतां विजहति। तनुभावनष्टसलिलाः आपगाः सन्तानैः व्यक्तिं भजन्ति। उत्क्षिपता केनापि भुवनं मत्पार्श्वमानीयते इव पश्य ॥

"ಮೇಲಕ್ಕೇಳುತ್ತಿರುವ ಬೆಟ್ಟಗಳ ಶಿಖರದಿಂದ ಭೂಮಿಯು ಕೆಳಕ್ಕೆ ಇಳಿಯುತ್ತಿದೆಯೋ ಎಂಬಂತಿದೆ; ಕಾಂಡಗಳು ಗೋಚರವಾಗುವುದರಿಂದ ಮರಗಳು ಎಲೆಗಳ ಮಧ್ಯದಲ್ಲಿ ಲೀನವಾಗಿರುವ ಸ್ಥಿತಿಯನ್ನು ಬಿಡುತ್ತಿವೆ. ಸಣ್ಣದಾಗಿ ನೀರಿಲ್ಲದಂತೆ ಕಾಣುತ್ತಿದ್ದ ನದಿಗಳು ವಿಸ್ತಾರದಿಂದ ಸ್ಪಷ್ಟತೆಯನ್ನು ಪಡೆಯುತ್ತಿವೆ. ಯಾರೋ ಮೇಲೆಕ್ಕೆಸೆದು ಭೂಮಿಯು ನನ್ನ ಪಕ್ಕಕ್ಕೆ ತರಲ್ಪಡುತ್ತಿದೆಯೋ ಎಂಬಂತಿದೆ; ನೋಡು".

ಆಕಾಶಯಾನದಿಂದ ಕೆಳಗಿಳಿಯುತ್ತಿದ್ದಾಗ ಭೂಮಿಯು ಹೇಗೆ ಕಾಣಿಸುತ್ತಿತ್ತೆಂಬ ಕವಿಕಲ್ಪನೆ ಇಲ್ಲಿ ಗಮನಾರ್ಹ. (ರಘುವಂಶದಲ್ಲಿ ರಾಮಸೀತೆಯರು ಪುಷ್ಪಕ ವಿಮಾನದಲ್ಲಿ ಕುಳಿತು ಬರುವಾಗ ಗೋಚರಿಸಿದ ಗಂಗಾ–ಯಮುನಾ–ಸಂಗಮದ ವರ್ಣನೆಯನ್ನು ಹೋಲಿಸಿ.)

उन्मज्जताम् — (ಮುಳುಗಿದ್ದು) ಮೇಲೇಳುತ್ತಿರುವ. स्कन्धोदयात् स्कन्धानाम् उदयात् (ಮರಗಳ) ಕಾಂಡಗಳು ಸ್ಪಷ್ಟವಾಗಿ ಕಾಣತೊಡಗಿರುವುದರಿಂದ पर्णाभ्यन्तरलीनताम्—ಮೇಲಿನಿಂದ ನೋಡಿದರೆ ಮರಗಳ ಕಾಂಡಗಳ ಎತ್ತರ ಗೋಚರ ವಾಗದಿರುವುದರಿಂದ ಅವು ಎಲೆಗಳ ಮಧ್ಯದಲ್ಲಿ ಅಡಗಿಹೋಗಿರುವಂತೆ ಕಾಣುತ್ತಿದ್ದು ಕೆಳಕ್ಕಿಳಿದು ಬಂದಂತೆಲ್ಲ ಈ ಸ್ಥಿತಿಯನ್ನು ಬಿಡುತ್ತಿರುವಂತೆ ಕಾಣುತ್ತವೆ. (ವರ್ಣನೆಯ ವಾಸ್ತವಿಕತೆ (Realism) ಗಮನಾರ್ಹ). तनुभाव—ಸಣ್ಣಗಾಗು ವಿಕೆಯಿಂದ नष्टसलिला:—ನೀರನ್ನು ಕಳೆದುಕೊಂಡಂತೆ ಕಾಣುವ, आपगा:—ನದಿಗಳು. संतानै:–ವಿಸ್ತಾರಗಳಿಂದ. व्यक्तिम्—ಸ್ಪಷ್ಟತೆಯನ್ನು, उत्क्षिपता—ಮೇಲಕ್ಕೆ ಎಸೆಯುತ್ತಿರುವ ; पूर्वापरसमुद्रावगाढ: ಪೂರ್ವ ಮತ್ತು ಪಶ್ಚಿಮ ಸಮುದ್ರಗಳಿಗೆ ಚಾಚಿಕೊಂಡಿರುವ. (ಕು. ಸಂ. पूर्वापरौ तोयनिधी वगाह्य—ಹೋಲಿಸಿ).

कनकरसनिस्यन्द:—ಚಿನ್ನದ ರಸವನ್ನು ಸುರಿಸುತ್ತಿರುವ.

सान्ध्य: — ಸಂಧ್ಯಾಕಾಲದ ; मेघपरिघ: इव — ಮೋಡಗಳ ಅಗಳಿಯಂತಿರುವ सानुमान्—ಪರ್ವತವು.

ಪದ್ಯ—4 (ಅನ್ವಯ) य: स्वायंभुवात् मरीचे: प्रबभूव स: सुरासुरगुरु: प्रजापति: सपत्नीक: अत्र तपस्यति ।।

"ಬ್ರಹ್ಮನ ಮಗನಾದ ಮರೀಚಿಯಿಂದ ಜನ್ಮತಾಳಿದ ಸುರಾಸುರ ಗುರುವಾದ ಪ್ರಜಾಪತಿಯು ಇಲ್ಲಿ ಪತ್ನಿಯೊಡನೆ ತಪಸ್ಸಿನಲ್ಲಿ ನಿರತನಾಗಿದ್ದಾನೆ. (ಮಾರೀಚನನ್ನು ಪ್ರಜಾಪತಿಗಳಲ್ಲಿ ಒಬ್ಬನೆಂದು ವಾಯುಪುರಾಣದಲ್ಲಿ ಮಾತ್ರ ಹೇಳಿದೆ. ಮಹಾಭಾರತದ ಏಳು, ವಿಷ್ಣುಪುರಾಣದ ಒಂಭತ್ತು ಮತ್ತು ಮನುವಿನಿಂದ ಹೇಳಲ್ಪಟ್ಟಿರುವ ಹತ್ತು ಜನ ಪ್ರಜಾಪತಿ (ಮೂಲಸೃಷ್ಟಿಕರ್ತರು)ಗಳ ಪೈಕಿ ಮಾರೀಚನನ್ನು ಎಣಿಸಿಲ್ಲ. ಇವನು ದಿತಿ, ಅದಿತಿ ಮತ್ತು ದಕ್ಷಬ್ರಹ್ಮನ ಹನ್ನೊಂದು ಜನ ಕನ್ಯೆಯರನ್ನು ಮದುವೆ ಯಾಗಿ ಸುರಾಸುರರಿಗೆಲ್ಲ ಜನ್ಮವಿತ್ತನೆಂದು ಹೇಳಿದೆ.

तपस्यति—तपस् ಎಂಬ ನಾಮ ಧಾತುವಿನಿಂದ ನಿಷ್ಪನ್ನವಾದ ಕ್ರಿಯಾಪದ. (ಪಾ. III-1-15. ಮತ್ತು ವಾರ್ತಿಕ ನೋಡಿ.)

अदितिपरिवर्धितमन्दारवृक्षम् — ಅದಿತಿಯಿಂದ ಬೆಳೆಸಲ್ಪಟ್ಟ ಮಂದಾರ ವೃಕ್ಷ ಗಳನ್ನುಳ್ಳ.

निर्वृतिस्थानम्—ಶಾಂತಿಯ ನೆಲೆ. अमृतह्रदमवगाढोऽस्मि—ಅಮೃತದ ಮಡುವಿನಲ್ಲಿ ಮುಳುಗಿದ್ದೇನೆ.

ಪದ್ಯ—5 (ಅನ್ವಯ) सत्कल्पवृक्षे वने प्राणानां अनिलेन उचिता वृत्ति: । काञ्चनपद्मरेणुकपिशे तोये धर्माभिषेकक्रिया । रत्नशिलातलेषु ध्यानम् । विबुधस्त्रीसन्निधौ संयम । अन्यमुनय: तपोभि: यत् कांक्षन्ति तस्मिन् अमी तपस्यन्ति ।।

" (ಕೇಳಿದ್ದನ್ನು ಕೊಡುವ) ಕಲ್ಪವೃಕ್ಷಗಳಿಂದ ಕೂಡಿರುವ ವನದಲ್ಲಿ, ಜೀವನಕ್ಕೆ ಗಾಳಿಯೇ ಆಹಾರ. ಚಿನ್ನದ ಕಮಲಗಳ ಧೂಳಿನಿಂದ ಹೊಂಬಣ್ಣವಾಗಿರುವ ನೀರಿನಲ್ಲಿ ಯಜ್ಞಾದಿ ಕರ್ಮಗಳಿಗಾಗಿ ಸ್ನಾನ; ರತ್ನಖಚಿತವಾದ ಶಿಲೆಗಳ ಮೇಲೆ ಕುಳಿತು ಧ್ಯಾನ; ದೇವಸ್ತ್ರೀಯರ ನಡುವೆ ಸಂಯಮ; ಯಾವ ಫಲಗಳಿಗಾಗಿ ಬೇರೆ ಋಷಿಗಳೆಲ್ಲ ತಪಸ್ಸನ್ನು ಆಚರಿಸುವರೋ, ಅವುಗಳಿದ್ದರೂ ಇಲ್ಲಿನವರು ತಪಸ್ಸನ್ನು ಮಾಡುವರು ".

अनिलेन वृत्तिः—ವನವು ಕೇಳಿದ್ದನ್ನು ಕೊಡುವ ಕಲ್ಪವೃಕ್ಷಗಳಿಂದ ಕೂಡಿದ್ದರೂ ಕೇವಲ ಗಾಳಿಯಿಂದಲೇ ಪ್ರಾಣಧಾರಣೆ.

धर्मार्थम् अभिषेकक्रिया—ಧರ್ಮಾಚರಣೆಗಾಗಿ ಸ್ನಾನ, ಭೋಗಕ್ಕಾಗಿ ಅಲ್ಲ.

रत्नशिलातलेषु—ಕ್ರೀಡೆಗಾಗಿ ಉಪಯೋಗಿಸುವ ರತ್ನಖಚಿತವಾದ ಶಿಲೆಗಳ ಮೇಲೆ ಈ ಮುನಿಗಳು ಧ್ಯಾನಮಾಡುವರು.

विबुध....संयमः — ಭೋಗದ ಆಕರ್ಷಣೆಯ ಮಧ್ಯದಲ್ಲಿ ಸಂಯಮದ ಅಭ್ಯಾಸ. ಹೀಗೆ ಯಾವ ಯಾವ ಸುಖಭೋಗಗಳನ್ನು ಪಡೆಯುವುದಕ್ಕಾಗಿ ಇತರ ಮುನಿಗಳು ತಪಸ್ಸನ್ನು ಮಾಡುವರೋ, ಅವುಗಳನ್ನೆಲ್ಲ ಪಡೆದಿದ್ದರೂ ಇಲ್ಲಿನ ಋಷಿಗಳು ತಪಸ್ಸನ್ನಾಚರಿಸುತ್ತಿರುವರು.

उत्सर्पिणी — ಹೆಚ್ಚು ಹೆಚ್ಚು ಉನ್ನತವಾದದ್ದು. महर्षिपत्नीसहितायै — ಋಷಿಪತ್ನಿಯರಿಂದೊಡಗೂಡಿದ. प्रतिपाल्यावसरः—ಕಾದಿರಬೇಕಾದ ಪ್ರಸಂಗ.

अन्तरान्वेषी भवामि—ಅವಕಾಶವನ್ನು ಕಂಡುಹಿಡಿಯುತ್ತೇನೆ.

ಪದ್ಯ—6 (ಅನ್ವಯ) (हे) बाहो मनोरथाय नाशंसे; वृथा किं स्पन्दसे पूर्वावधीरितं श्रेयः दुःखं हि परिवर्तते ॥

" ಎಲೈ (ಬಲ) ತೋಳೇ; (ನಾನು) ಯಾವ ಮನೋರಥವನ್ನೂ ಆಶಿಸುವುದಿಲ್ಲ; ವ್ಯರ್ಥವಾಗಿ ಏತಕ್ಕೆ ಅದುರುವೆ. ಮೊದಲು ತಿರಸ್ಕರಿಸಲ್ಪಟ್ಟ ಶ್ರೇಯಸ್ಸು ದುಃಖವಾಗಿಯೇ ಪರಿಣಮಿಸುತ್ತದೆ ".

ಮೊದಲನೆಯ ಅಂಕದಲ್ಲಿ ದುಷ್ಯಂತನು ಕಣ್ವಾಶ್ರಮವನ್ನು ಪ್ರವೇಶಿಸುತ್ತಿದ್ದಾಗ ಇದೇ ರೀತಿ ಬಲತೋಳು ಅದುರುವ ಸಂದರ್ಭವನ್ನು ಗಮನಿಸಿ. ಕಾಳಿದಾಸನಿಗೆ ಶಕುನಶಾಸ್ತ್ರದಲ್ಲಿ ಇರುವ ಪ್ರತಿಪತ್ತಿಯನ್ನು ಈ ಸಂದರ್ಭಗಳು ಸೂಚಿಸುತ್ತವೆ.

अभूमिरियमविनयस्य—ಇದು ಅವಿಧೇಯತೆಗೆ ಸ್ಥಳವಲ್ಲ.

अबालसत्त्वो बालः—(ಕಡಿಮೆಯಲ್ಲದ) ಅಧಿಕವಾದ ಬಲವುಳ್ಳ ಬಾಲಕ.

ಪದ್ಯ—7 (ಅನ್ವಯ) मातुः अर्धपीतस्तनं आमर्दक्लिष्टकेसरम्। सिंहशिशुं बलात्कारेण प्रक्रीडितुं कर्षति॥

" ತಾಯಿಯ ಹಾಲನ್ನು ಅರ್ಧಮಾತ್ರ ಕುಡಿದಿರುವ, ಮತ್ತು ಎಳೆದಾಟದಿಂದ ಗೋಜಿಹೋದ ಕೇಸರವನ್ನುಳ್ಳ ಸಿಂಹದ ಮರಿಯನ್ನು ಬಲತ್ಕಾರಪಡಿಸಿ ಆಟಕ್ಕಾಗಿ ಸೆಳೆಯುತ್ತಿರುವವನು (ಯಾರೀ ಬಾಲಕ ?) "

आमर्द ಎಳೆದಾಟ क्लिष्ट—ಗೋಜಿಹೋದ, ಕೆದರಿದ ;

प्रक्रीडितुं—(ಕೇವಲ) ಆಟವಾಡುವುದಕ್ಕಾಗಿ

(ಪುಟ 80)

जृम्भस्व—ಆಕಳಿಸು ; ಬಾಯಿಬಿಡು.

अपत्यनिर्विशेषाणि—ಮಕ್ಕಳಂತೆ ಭಾವಿಸಲ್ಪಟ್ಟಿರುವ.

विप्रकरोषि—ಪೀಡಿಸುತ್ತೀಯೆ, संरम्भ—ದುಷ್ಟತನ.

स्थाने खलु—ಯುಕ್ತವಾಗಿಯೇ ಇದೆ, सर्वदमनः ಎಲ್ಲರನ್ನೂ ಅಡಗಿಸಿ ಹತೋಟಿಯಲ್ಲಿಡುವವನು. औरसे पुत्रे इव—ಹೊಟ್ಟೆಯಲ್ಲಿ ಹುಟ್ಟಿದ ಮಗನ ವಿಷಯದಲ್ಲಿ ಹೇಗೋ ಹಾಗೆ ; स्निह्यति—ಪ್ರೀತಿಯನ್ನು ಹೊಂದುತ್ತಿದೆ.

लङ्घयिष्यति—ಮೇಲೆ ಬೀಳುತ್ತದೆ ; ತೊಂದರೆಗೊಳಿಸುತ್ತದೆ.

अहो .... भीतोऽस्मि — ಇಲ್ಲಿನ ವ್ಯಂಗ್ಯವನ್ನು ಗಮನಿಸಿ. ಭಯವೇ ಇಲ್ಲವೆಂದು ತಾತ್ಪರ್ಯ.

ಪದ್ಯ—8 (ಅನ್ವಯ) अयं बालः स्फुलिङ्गावस्थया स्थितः एधापेक्षः वह्निरिव महतः तेजसो बीजं मे प्रतिभाति ॥

" ಕಿಡಿಯ ಸ್ಥಿತಿಯಲ್ಲಿದ್ದು ಕಟ್ಟಿಗೆಯನ್ನು ಮಾತ್ರ ಅಪೇಕ್ಷಿಸುವ ಬೆಂಕಿಯಂತೆ ಈ ಬಾಲಕನು ಹೆಚ್ಚಿನ ತೇಜಸ್ಸಿಗೆ ಮೂಲವಾಗಿ ನನಗೆ ತೋರುತ್ತಿದ್ದಾನೆ ".

स्फुलिङ्गावस्थया — ಕಿಡಿಯ ಅವಸ್ಥೆಯಿಂದ ; एधापेक्षः — ಕಟ್ಟಿಗೆಯಿಂದ ವೃದ್ಧಿಯನ್ನು ಅಪೇಕ್ಷಿಸುವ क्रीडनकम्—ಆಟದ ಸಾಮಾನನ್ನು.

वर्णचित्रतः—ಬಣ್ಣ ಹಾಕಿದ ; मृत्तिकामयूरः—ಮಣ್ಣಿನ ನವಿಲು.

दुर्ललिताय ; दुष्टं ललितं यस्य सः, ಯಾವನನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲವೋ ಅಂತಹ ಮೊಂಡ.

स्पृहेरीप्सितः—ಎಂಬ ಸೂತ್ರಾನುಸಾರ अस्मै ಎಂಬಲ್ಲಿ ಚತುರ್ಥೀ ವಿಭಕ್ತಿ ಬಂದಿದೆ.

ಪದ್ಯ—9 (ಅನ್ವಯ) अनिमित्तहासैः आलक्ष्यदन्तमुकुलान्, अव्यक्तवर्णरमणीयवचः प्रवृत्तीन् तनयान् वहन्तः अङ्काश्रयप्रणयिनः धन्याः तदङ्गरजसा मलिनीभवन्ति ॥

ಅಕಾರಣವಾಗಿ ನಗುವಾಗ ಸ್ವಲ್ಪ ಮಾತ್ರ ಕಾಣುವ ಮೊಗ್ಗುಗಳಂತಿರುವ ದಂತಗಳು ; ಅಸ್ಪಷ್ಟವಾದ ವರ್ಣಗಳಿಂದ ರಮಣೀಯವಾದ ಮಾತುಗಳು ಇಂತಹ ;

ಮಕ್ಕಳನ್ನು ಪ್ರೀತಿಯಿಂದ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಅವರ ಮೈಯಿನ ಕೊಳೆಯಿಂದ ಮಲಿನತೆಯನ್ನು ಪಡೆಯುವವರೇ ಧನ್ಯರು !

आलक्ष्य—ಸ್ವಲ್ಪಮಾತ್ರ ಗೋಚರವಾಗುವ ; दन्ता मुकुला इव येषां तान्। अङ्के आश्रयः ; तत्र प्रणयः येषां ते—अङ्काश्रयप्रणयिनः ;

ಈ ಶ್ಲೋಕವು ಕಾಳಿದಾಸನ ಅಪತ್ಯಪ್ರೇಮದ ಆದರ್ಶಕ್ಕೆ ಉತ್ತಮ ಉದಾಹರಣೆ. ಈ ವರ್ಣನೆಯಿಂದ ತನಗೆ ಈ ಸುಖವಿಲ್ಲವೆಂಬ ದುಷ್ಯಂತನ ವ್ಯಥೆ ಧ್ವನಿತವಾಗುತ್ತದೆ.

(ಪುಟ 81)

दुर्मोकहस्तग्रहेण—ಬಿಡಿಸಲಾಗದ ಬಿಗಿಮುಷ್ಟಿಯುಳ್ಳ, बाध्यमानम्—ಪೀಡಿಸಲ್ಪಡುತ್ತಿರುವ (बाध् ಧಾತುವಿನ ಕರ್ಮಣಿ ವರ್ತಮಾನದ ಕೃದಂತ. बालमृगेन्द्रम् ಎಂಬುದರ ವಿಶೇಷಣ).

स्थानप्रत्ययात्—ಇವನಿರುವ ಸ್ಥಳ ವಿಶೇಷದ ವಿಶ್ವಾಸದಿಂದ.

ಪದ್ಯ—10 (ಅನ್ವಯ) कस्यापि कुलाङ्कुरेण अनेन स्पृष्टस्य मम गात्रेषु एवं सुखम्। यस्य कृतिनः अङ्कात् अयं प्ररूढः तस्य चेतसि कां निर्वृतिं कुर्यात्॥

" ಯಾವುದೋ ವಂಶದ ಚಿಗುರಿನಂತಿರುವ ಇವನ ಸ್ಪರ್ಶದಿಂದಲೇ ನನ್ನ ಮೈಗೆ ಇಷ್ಟು ಸುಖವಾಗಿದೆ ; ಹೀಗಿರುವಲ್ಲಿ ಯಾವ ಪುಣ್ಯವಂತನ ಮಗನಾಗಿ ಇವನು ಹುಟ್ಟಿರುವನೋ ಅವನ ಹೃದಯಕ್ಕೆ ಮತ್ತೆಷ್ಟು ಸುಖವನ್ನುಂಟುಮಾಡುವನೋ ?"

कुलाङ्कुरेण — ಕುಲವನ್ನು ಮುಂದುವರಿಸುವ ಚಿಗುರು निर्वृतिम् — ಸಮಾಧಾನ ; ಸುಖ ವಿಶೇಷ.

रूपसंवादिनी आकृतिः—(ನಿನ್ನ) ರೂಪವನ್ನು ಹೋಲುವ ಆಕೃತಿ.

विस्मिता — (वि + स्मि ಧಾತುವಿನ ಪ್ರೇರಣಾರ್ಥಕ णिजन्त) ರೂಪದ ಭೂತ ಕೃದಂತ, ಸ್ತ್ರೀಲಿಂಗ) ವಿಸ್ಮಯಗೊಂಡಿದ್ದೇನೆ.

अप्रतिलोमः—ಅನುಕೂಲನಾಗಿ ; ಒಗ್ಗಿದವನಾಗಿ.

व्यपदेशः—(ಹೆಸರಿಸುವ) ವಂಶ.

ಪದ್ಯ—11 (ಅನ್ವಯ) ये पूर्वं क्षितिरक्षार्थं रसाधिकेषु भवनेषु निवासम् उशन्ति तेषां पश्चात् नियतैकयतिव्रतानि तरुमूलानि गृहीभवन्ति ॥

" ಮೊದಲು ಯಾರು ಜಗತ್ತನ್ನು ರಕ್ಷಿಸುವುದಕ್ಕಾಗಿ ಅನೇಕ ಭೋಗಗಳಿಂದ ಕೂಡಿದ ಅರಮನೆಗಳಲ್ಲಿ ವಾಸವನ್ನು ಬಯಸುವರೋ, ಅವರಿಗೆ ಅನಂತರ ಕಾಲದಲ್ಲಿ ನಿಯತವಾದ ಸಂನ್ಯಾಸದ ವ್ರತಗಳಿಗರ್ಹವಾದ ಮರಗಳ ಬುಡಗಳೇ ಮನೆಗಳಾಗುತ್ತವೆ ".

ಈ ಶ್ಲೋಕದಲ್ಲಿ ದುಷ್ಯಂತನು ತನ್ನ ಪೂರ್ವಜರ ಕುಲವ್ರತವನ್ನು ನೆನಪಿಗೆ ತಂದುಕೊಳ್ಳುತ್ತ, ತನ್ನ ಕಣ್ಣೆದುರಿನ ಈ ಬಾಲಕನು ಅಂತಹವರೊಬ್ಬರ ಮಗನಾಗಿರಬೇಕೆಂದು ಊಹಿಸುತ್ತಾನೆ.

रसाधिकेषु—ಅನೇಕ ಇಂದ್ರಿಯ ಸುಖ ಸಾಧನಗಳಿಂದ ಕೂಡಿದ

उशन्ति—ಬಯಸುತ್ತಾರೆಯೋ ; (वश-कान्तौ ಧಾತು ವರ್ತಮಾನ, ಪ್ರ.ಪು.ಬ.)

आत्मगत्या—ತಮ್ಮ ಸಾಮರ್ಥ್ಯದಿಂದ.

(ಪುಟ 82)

अनार्यः परदारव्यवहारः—ಪರರ ಹೆಂಡತಿಯ ವಿಚಾರವಾಗಿ ವ್ಯವಹರಿಸುವುದು ಯೋಗ್ಯರಿಗೆ ಸರಿಯಲ್ಲ, ತಕ್ಕದ್ದಲ್ಲ.

शकुन्तलावण्यम् शकुन्तस्य लावण्यम्—ಪಕ್ಷಿಯ ಸೌಂದರ್ಯವನ್ನು. कुत्रवा मम माता—ಬಾಲಕನಿಗೆ शकुन्त ಶಬ್ದದ ಪರಿಚಯವಿಲ್ಲದ ಕಾರಣ, ತನ್ನ ತಾಯಿಯ ಹೆಸರನ್ನು ಕೇಳಿ ಈ ಪ್ರಶ್ನೆಯನ್ನು ಕೇಳುವನು. ಇದರಿಂದ, ದುಷ್ಯಂತನಿಗೆ ಇವನ ತಾಯಿಯ ಹೆಸರು ತಿಳಿದಂತಾಗುತ್ತದೆ. रक्षाकरण्डकम्—ರಕ್ಷೆಗಾಗಿ ಹಾಕಿದ್ದ ತಾಯಿತಿ ಅಥವಾ ಯಂತ್ರ.

(ಪುಟ 83)

नियमव्यापृतायै—ನಿಷ್ಠೆಯಲ್ಲಿ ಆಸಕ್ತಳಾಗಿರುವ एवं....प्रत्याययति ಈ ವಿವಾದವೇ ನಂಬಿಕೆಯನ್ನುಂಟುಮಾಡುತ್ತಿದೆ.

एकवेणीधरा—ಗಂಟುಹಾಕಿದ ತಲೆಕೂದಲನ್ನುಳ್ಳ. (ಇದು ಪ್ರಿಯನಿಂದ ಅಗಲಿರುವ ದುಃಖದ ಸೂಚಕ).

ಪದ್ಯ — 12 (ಅನ್ವಯ) परिधूसरे वसने वसाना नियमक्षाममुखी धृतैकवेणिः शुद्धशीला अतिनिष्करुणस्य मम दीर्घं विरहव्रतं बिभर्ति ॥

" ಬೂದು ಬಣ್ಣದ (ಎರಡು) ವಸ್ತ್ರಗಳು; ತಪೋನಿಷ್ಠೆಯಿಂದ ಬಾಡಿದ ಮುಖ (ಬಾಚದೆ) ಗಂಟು ಹಾಕಿದ ತಲೆಕೂದಲು ; ಶುದ್ಧವಾದ ಶೀಲವನ್ನುಳ್ಳ ಇವಳು ನಿಷ್ಕರುಣನಾದ ನನ್ನ ದೀರ್ಘವಿರಹವನ್ನು ಅನುಭವಿಸುತ್ತಿದ್ದಾಳೆ ".

(ಪುಟ 84)

ಪದ್ಯ—13 (ಅನ್ವಯ) (हे) सुमुखि, दिष्ट्या स्मृतिभिन्नमोहतमसो मे प्रमुखे उपरागान्ते शशिनः योगम् समुपगता रोहिणी (इव) स्थितासि ॥

"ಎಲೈ ಸುಮುಖಿ; ಸುದೈವದ ದೆಸೆಯಿಂದ, ನೆನಪಿನಿಂದ ನಷ್ಟವಾದ ಅಜ್ಞಾನದ ಕತ್ತಲನ್ನುಳ್ಳ, ನನ್ನ ಕಣ್ಣೆದುರಿಗೆ, ಗ್ರಹಣದ ನಂತರ ಚಂದ್ರನ ಯೋಗವನ್ನು ಹೊಂದಿದ ರೋಹಿಣಿಯಂತೆ, ನಿಂತಿದ್ದೀಯೆ. !"

उपरागान्ते—ಗ್ರಹಣ ಮುಗಿದ ಮೇಲೆ

ಪದ್ಯ—14 (ಅನ್ವಯ) यत् ते असंस्कारपाटलोष्ठपुटं मुखम् दृष्टम् बाष्पेण जयशब्दे प्रतिषिद्धेऽपि, मया जितम् ॥

"ಅಲಂಕಾರವಿಲ್ಲದೆಯೂ ಕೆಂಪಾದ ತುಟಿಗಳನ್ನುಳ್ಳ ನಿನ್ನ ಮುಖವನ್ನು ಕಂಡದ್ದರಿಂದ (ನಿನ್ನ) ಜಯಕಾರವು ಕಣ್ಣೀರಿನಿಂದ ತಡೆಯಲ್ಪಟ್ಟರೂ ಕೂಡ ನಾನು ಜಯಿಸಿದಂತಾಯ್ತು".

भागधेयानि—ಸುದೈವವನ್ನು; ಅದೃಷ್ಟವನ್ನು प्रणिपत्य—ನಮಸ್ಕರಿಸಿ.

ಪದ್ಯ—15 (ಅನ್ವಯ) सुतनु, ते हृदयात् प्रत्यादेशव्यलीकम् अपैतु । तदा मे मनसः संमोहः किमपि बलवानभूत् । प्रबलतमसां शुभेषु प्रवृत्तयः एवंप्रायाः; अन्धः शिरसि क्षिप्तां स्रजमपि अहिशङ्कया धुनोति ॥

"ಸುಮುಖಿ, ನಿರಾಕರಣದ ಕಹಿಯು ನಿನ್ನ ಹೃದಯದಿಂದ ದೂರವಾಗಲಿ; ಆಗ ನನ್ನ ಮನಸ್ಸಿನ (ಅಜ್ಞಾನದ) ಕತ್ತಲು ಬಹಳ ಗಾಢವಾಗಿತ್ತು, ಬಲವಾದ ಅಂಧಕಾರ ಕವಿದಿರುವವರ ನಡವಳಿಕೆಗಳು (ತಮಗುಂಟಾಗುವ ಶುಭದ ವಿಷಯದಲ್ಲಿಯೂ ಕೂಡ ಪ್ರಾಯಃ ಹೀಗೆಯೇ ಇರುತ್ತವೆ; ಕುರುಡನು ತನ್ನ ತಲೆಯ ಮೇಲಿಟ್ಟ ಹೂವಿನ ಮಾಲಿಕೆಯನ್ನೂ ಕೂಡ, ಹಾವೆಂಬ ಭಯದಿಂದ ಕಿತ್ತೆಸೆಯುವನು".

प्रत्यादेशव्यलीकम्—ಅಪ್ರಿಯವಾದ ನಿರಾಕರಣ, ಅಥವಾ ಸುಳ್ಳಾದ ನಿರಾಕರಣ. (व्यलीकंत्वप्रियेऽनृते—ಅಮರ) मनसः संमोहः—ಮನಸ್ಸಿನ ಕತ್ತಲೆ, ಬುದ್ಧಿ ಮಾಂದ್ಯ प्रबलतमसां — ಬಲವಾದ ಮೌಢ್ಯದಿಂದಾವೃತರಾದವರ स्रजम् — ಹೂವಿನ ಮಾಲಿಕೆಯನ್ನು; अहिशङ्कया—ಹಾವೆಂಬ ಭಯದಿಂದ पुराकृतम्—ಹಿಂದೆಮಾಡಿದ (ಕರ್ಮ) सानुक्रोशोऽपि—ಮೃದು ಹೃದಯ (ಸಹಾನುಭೂತಿ) ವುಳ್ಳವನಾದರೂ विरसः—ಕ್ರೂರನಾಗಿ. ಪ್ರೀತಿಯಿಲ್ಲದವನಾಗಿ उद्धृतविषादशल्यः—ಹೊರಕ್ಕೆ ತೆಗೆಯಲ್ಪಟ್ಟ ದುಃಖದ ಬಾಣವುಳ್ಳವನಾಗಿ.

(ಪುಟ 85)

ಪದ್ಯ — 16 (ಅನ್ವಯ) (हे) सुतनु, अधरं परिबाधमानः यः ते बाष्पबिन्दुः पूर्वं मोहात् मया उपेक्षितः, अद्य आकुटिलपक्ष्मविलग्नं बाष्पं प्रमृज्य विगतानुशयः तावत् भवेयम् ॥

" ಕೆಳತುಟಿಯನ್ನು ಬಾಧಿಸುತ್ತಿದ್ದ ಯಾವ ನಿನ್ನ ಕಣ್ಣೀರಿನ ಹನಿಯು ಹಿಂದೆ ನನ್ನಿಂದ ಅಜ್ಞಾನದ ಕಾರಣ ಉಪೇಕ್ಷಿಸಲ್ಪಟ್ಟಿತೋ; ಈಗ ಕುಟಿಲವಾದ ರೆಪ್ಪೆಗಳಲ್ಲಿ ಅಂಟಿಕೊಂಡಿರುವ ಆ ಕಣ್ಣೀರನ್ನು ಒರೆಸಿ ಪಶ್ಚಾತ್ತಾಪವನ್ನು ಹೋಗ ಲಾಡಿಸಿಕೊಳ್ಳುತ್ತೇನೆ.

ऋतुसमवायचिह्नम् — ಋತುವಿನೊಡನೆ ಸಂಬಂಧವನ್ನು ಹೊಂದಿದ ಗುರುತಾಗಿ;
लता कुसुमं प्रतिपद्यताम्—ಲತೆಯು ಹೂವನ್ನು ಪಡೆಯಲಿ. ಇದರ ಧ್ವನಿ ನೀನು ನನ್ನ ಪುನಸ್ಸಮಾಗಮನವನ್ನು ಹೊಂದಿದ ಕುರುಹಾಗಿ ಈ ಉಂಗುರವನ್ನು ಧರಿಸು.

त्वां पुरस्कृत्य—ನಿನ್ನನ್ನು ಮುಂದಿಟ್ಟುಕೊಂಡು
जिहेमि—ನಾಚುತ್ತೇನೆ.

(ಪುಟ 86)

ಪದ್ಯ—17 (ಅನ್ವಯ) रणशिरसि ते पुत्रस्य अग्रयायी भुवनस्य भर्ता अयं दुष्यन्त इत्यभिहितः। यस्य चापेन विनिवर्तितकर्म तत् मघोनः कोटिमत्कुलिशं आभरणं जातम् ॥

" ಯುದ್ಧರಂಗದಲ್ಲಿ ನಿನ್ನ ಮಗನಿಗೆ ನಾಯಕನಾದ ಮತ್ತು ಪ್ರಪಂಚಕ್ಕೆ ರಕ್ಷಕನಾದ ಇವನು ದುಷ್ಯಂತನೆಂಬ ಹೆಸರುಳ್ಳವನು. ಇವನ ಧನುಸ್ಸಿನಿಂದ (ಯುದ್ಧದ) ಕೆಲಸವನ್ನು ನೆರವೇರಿಸಿಕೊಂಡ ಮೊನೆಯಾದ ಆ ವಜ್ರಾಯುಧವೂ ಕೂಡ ಇಂದ್ರನಿಗೆ (ಕೇವಲ) ಆಭರಣವಾಗಿ ಪರಿಣಮಿಸಿತು ".

कोटिमत्—ಚೂಪಾದ ಮೊನೆಯನ್ನುಳ್ಳ (कुलिशम् ಎಂಬುದರ ವಿ.)
पुत्रप्रीतिपिशुनेन—ಮಗನ ಮೇಲಿನ ಪ್ರೀತಿಯನ್ನು ಸೂಚಿಸುವ
दिवौकसां पितरौ—ದೇವತೆಗಳ ತಂದೆ ತಾಯಿಯರಾದ ಮಾರೀಚ ಮತ್ತು ಅದಿತಿ
वासवनियोज्यः—ಇಂದ್ರನ ಸೇವಕನಾದ.

ಪದ್ಯ—18 (ಅನ್ವಯ) आखण्डलसमः भर्ता; सुतः जयन्तप्रतिमः, ते अन्या आशीः न योग्या; पौलोमीसदृशी भव ॥

" ನಿನ್ನ ಪತಿ ಇಂದ್ರನಿಗೆ ಸಮನಾದವನು; ಮಗ ಜಯಂತನನ್ನು ಹೋಲುವನು; ನಿನಗೆ ಬೇರೆ ಯಾವ ಆಶೀರ್ವಾದವೂ ಸರಿಯಲ್ಲ; ಶಚೀದೇವಿಗೆ ಸದೃಶಳಾಗು ".

जयन्तः —ಇಂದ್ರನ ಮಗ; पौलोमी—ಇಂದ್ರನ ಹೆಂಡತಿಯಾದ ಶಚೀದೇವಿ.

ಪದ್ಯ—19 (ಅನ್ವಯ) दिष्ट्या साध्वी शकुन्तला, इदं सदपत्यं ; भवान् इति श्रद्धा, वित्तं, विधिश्च तत् त्रितयं समागतम् ॥

" ಪತಿವ್ರತೆಯಾದ ಶಕುಂತಲೆ; ಈ ಒಳ್ಳೆಯ ಮಗ ಮತ್ತು ನೀನು; ಹೀಗೆ ಶ್ರದ್ಧೆ, ಧನ; ಮತ್ತು ಶಾಸ್ತ್ರೀಯವಾದ ವಿಧಿ ಇವು ಮೂರೂ ಸುದೈವದ ದೆಸೆಯಿಂದ ಒಟ್ಟುಗೂಡಿದಂತಾಯಿತು ".

अभिप्रेतसिद्धिः—ಇಷ್ಟಾರ್ಥ ಸಿದ್ಧಿ ; प्राक्—ಮೊದಲು.

(ಪುಟ 87)

ಪದ್ಯ—20 (ಅನ್ವಯ) कुसुमं पूर्वं उदेति ; ततः फलं (उदेति) घनोदयः प्राक् ; तदनन्तरं पयः निमित्तनैमित्तिकयोः क्रमः अयम्; तव प्रसादस्य तु संदपः पुरः ॥

" ಮೊದಲು ಹೂವು, ಅನಂತರ ಹಣ್ಣು ; ಮೋಡ ಮೊದಲು, ಅನಂತರ (ಮಳೆಯ) ನೀರು. ಕಾರಣ ಕಾರ್ಯಗಳ ಕ್ರಮ ಹೀಗಾದರೆ ನಿಮ್ಮ ವಿಷಯದಲ್ಲಿ ಬಯಸಿದ ಸಂಪತ್ತು ಮೊದಲು ; ಅನಂತರ ಅನುಗ್ರಹ ".

उपयम्य—ಮದುವೆಯಾಗಿ ; कस्यचित् कालस्य—ಸ್ವಲ್ಪಕಾಲದ ನಂತರ स्मृति-शैथिल्यात्—ನೆನಪು ಸಡಿಲವಾದ ಕಾರಣ ; ऊढपूर्वां—ಹಿಂದೆ ವಿವಾಹಿತಳನ್ನು.

ಪದ್ಯ—21 (ಅನ್ವಯ) यथा समक्षरूपे गजः न इति ; तस्मिन्नपक्रामति संशयः स्यात् ; पदानि दृष्ट्वा तु प्रतीतिः भवेत् , तथाविधः मे मनसः विकारः॥

" ಕಣ್ಣೆದುರಿಗೆ ಕಂಡಾಗ ಇದು ಆನೆಯಲ್ಲವೆಂದೂ, (ಅದು) ಹೊರಟುಹೋದ ಮೇಲೆ ಸಂಶಯವುಂಟಾಗಿ, ಕಡೆಗೆ ಹೆಜ್ಜೆಯ ಗುರುತುಗಳನ್ನು ಕಂಡಾಗ ಹೇಗೆ ನಂಬಿಕೆಯುಂಟಾಗಬಹುದೋ ಹಾಗಿತ್ತು (ಆಗ) ನನ್ನ ಮನಸ್ಸಿನ ವಿಕಾರ.

तस्मिन् अपक्रामति—ಸತಿಸಪ್ತಮೀ ಪ್ರಯೋಗ ; प्रत्यक्षवैक्लव्यम्—ಪ್ರತ್ಯಕ್ಷವಾಗಿ ಗೋಚರಿಸಿದ ದುಃಖವನ್ನುಳ್ಳ वचनीयात्— ನಿಂದೆಯಿಂದ चरितार्था — ಕೃತಾರ್ಥಳಾಗಿ ; मन्युः—ಕೋಪವು.

(ಪುಟ 88)

ಪದ್ಯ—22 (ಅನ್ವಯ) शापात् स्मृतिरोधरूक्षे भर्तरि प्रतिहता असि अपेततमसि (भर्तरि) तवैव प्रभुता। मलोपहतप्रसादे दर्पणतले छाया न मूर्च्छति ; शुद्धे तु सुलभावकाशा ॥

" ಶಾಪದ ಕಾರಣ ನೆನಪಿನ ಅಡಚಣೆಯಿಂದ ನಿನ್ನ ಪತಿ ಕ್ರೂರನಾಗಿದ್ದಾಗ ತಿರಸ್ಕೃತಳಾದೆ. (ಈಗ) ಕತ್ತಲನ್ನು ಕಳೆದ ಪತಿಯ ಮೇಲೆ ನಿನ್ನದೇ ಅಧಿಕಾರ ; ಕೊಳೆಯಿಂದ ಮುಚ್ಚಿದ ಕನ್ನಡಿಯಲ್ಲಿ ಪ್ರತಿಬಿಂಬವು ಮೂಡದು, ಶುದ್ಧವಾಗಿದ್ದಲ್ಲಿ ಸುಲಭವಾಗಿ ಕಾಣಿಸುವುದಷ್ಟೆ. मलोपहतप्रसादे — ಕೊಳೆಯಿಂದ (ಮಂಕಾದ)

ನಾಶಗೊಳಿಸಲ್ಪಟ್ಟ ಪ್ರಸನ್ನತೆ (ಸ್ವಚ್ಛತೆ) ಯುಳ್ಳ. अभिनन्दितः कच्चित् — ಅಭಿನಂದಿಸಲ್ಪಟ್ಟನೆ ?

अनुष्ठितजातकर्मा — ನಡೆಸಲ್ಪಟ್ಟ ಜಾತಕರ್ಮಸಂಸ್ಕಾರವನ್ನುಳ್ಳ ; ಜಾತಕರ್ಮ ವೆಂಬುದು ಶಿಶುಜನನವಾದ ಮೂರು ದಿನಗಳ ಒಳಗೆ ನಡೆಸಬೇಕಾದ ಶಾಸ್ತ್ರೀಯ ಸಂಸ್ಕಾರ.

शाकुन्तलेयः — शकुन्तलायाः अपत्यं पुमान् — शाकुन्तला + एय (ढक् "स्त्रीभ्यो ढक्" ಎಂಬ ಸೂತ್ರಾನುಸಾರ)

भाविनम् — ಮುಂದೆ ಆಗಲಿರುವ.

ಪದ್ಯ — 23 (ಅನ್ವಯ) अनुद्घातस्तिमितगतिना रथेन तीर्णजलधिः अप्रतिरथः सप्तद्वीपां वसुधां पुरा जयति । अयं इह सत्वानां प्रसभदमनात् सर्वदमनः, लोकस्य भरणात् भरत इति पुनः आख्यां यास्यति ॥

" ಅಸ್ಖಲಿತವಾದ ದೃಢಗತಿಯುನ್ನುಳ್ಳ ರಥದಿಂದ, ಸಮುದ್ರಗಳನ್ನೆಲ್ಲ ದಾಟಿ, ಎದುರಾಳಿಯಿಲ್ಲದೆ (ಇವನು) ಏಳು ದ್ವೀಪಗಳಿಂದ ಕೂಡಿದ ಭೂಮಂಡಲವನ್ನು ಜಯಿಸುವವನು ; ಮೃಗಗಳನ್ನೆಲ್ಲ ಬಲಾತ್ಕಾರವಾಗಿ ಅಡಗಿಸುತ್ತಿರುವ ಕಾರಣ ಇಲ್ಲಿ ಸರ್ವದಮನನೆಂದು ಪ್ರಸಿದ್ಧನಾಗಿರುವ ಇವನು ಲೋಕವನ್ನೆಲ್ಲ ರಕ್ಷಿಸುವುದರಿಂದ ಮುಂದೆ ಭರತನೆಂಬ ಹೆಸರನ್ನು ಪಡೆಯುವನು "

अनुद्घात — ಹಳ್ಳತಿಟ್ಟುಗಳಲ್ಲಿ ಕುಲುಕದೆ ಇರುವ, अप्रतिरथः — ಎದುರಾಳಿ ಯಿಲ್ಲದವನು. पुराजयति "यावत्पुरानिपातयोर्लट्" ಎಂಬ ಸೂತ್ರಾನುಸಾರ ಭವಿಷ್ಯತ್ಕಾಲದ ಅರ್ಥವನ್ನು ವರ್ತಮಾನಕಾಲದ ಕ್ರಿಯಾಪದದಿಂದ ಸೂಚಿಸಿದೆ. लोकस्य भरणात् भरतः — ಭರತ ಶಬ್ದವು ಭೃ ರಕ್ಷಿಸು ; ಆಧಾರವಾಗಿರು ; ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ.

श्रावयितव्यः — ಶ್ರು ಧಾತುವಿನ ಪ್ರೇರಣಾರ್ಥಕ ರೂಪದ ವಿಧ್ಯರ್ಥ ಕೃದಂತ ; ಕೇಳುವಂತೆ ಮಾಡಲ್ಪಡಬೇಕು. विहायसा — ಆಕಾಶಮಾರ್ಗದಿಂದ

ಪದ್ಯ — 24 (ಅನ್ವಯ) पार्थिवः प्रकृतिहिताय प्रवर्तताम् ; श्रुतमहतां सरस्वती महीयताम् । परिगतशक्तिः नीललोहितः आत्मभूः ममापि पुनर्भवं क्षपयतु ॥

" ದೊರೆಯು ಪ್ರಜೆಗಳ ಹಿತಕ್ಕಾಗಿ ಶ್ರಮಿಸಲಿ ; ಜ್ಞಾನದಿಂದ ಶ್ರೇಷ್ಠರಾದ ಕವಿಗಳ ವಾಣಿ ಮೆರೆಯಲಿ (ಗೌರವಿಸಲ್ಪಡಲಿ) ಶಕ್ತಿಸಹಿತನಾದ ಸ್ವಯಂಭೂ ಶಿವನು ನನ್ನ ಪುನರ್ಜನ್ಮವನ್ನು ಕೊನೆಗಾಣಿಸಲಿ ".

श्रुतमहताम् — ವೈದಿಕ ಜ್ಞಾನದಿಂದ ಮಹತ್ವವನ್ನು ಪಡೆದವರ.

महीयताम्—ಗೌರವಿಸಲ್ಪಡಲಿ परिगतशक्तिः—ಶಕ್ತಿರೂಪಳಾದ ಪಾರ್ವತಿಯಿಂದೊಡಗೂಡಿದ, ಅಥವಾ ಎಂಟು ಶಕ್ತಿವಿಶೇಷಗಳಿಂದ ಕೂಡಿದ. नीललोहितः—नीलश्चासौ लोहितश्च. ಶಿವನ ಹೆಸರು. ಇದಕ್ಕೆ ವ್ಯುತ್ಪತ್ತಿಯನ್ನು ಎರಡು ವಿಧವಾಗಿ ಹೇಳಿದೆ. (1) वामभागे नीलः — (ಎಡಭಾಗ ಕಪ್ಪು) दक्षिणभागे लोहितः (ಬಲಭಾಗ ಹೊಂಬಣ್ಣ–ಪಾರ್ವತಿಯಿಂದೊಡಗೂಡಿರುವುದರಿಂದ); (2) नीलः कण्ठे (ಕುತ್ತಿಗೆ ಕಪ್ಪು) लोहितश्च केशेषु (ಜಟೆ ಹೊಂಬಣ್ಣ).

भरतवाक्यम्—ಪರಿಶಿಷ್ಟನೋಡಿ.

ಹಿಂದೆ ಕಣ್ವರ ಆಶ್ರಮದಲ್ಲಿ ಅಂಕುರಿಸಿದ ದುಷ್ಯಂತ ಶಕುಂತಲೆಯರ 'ಮರ್ತ್ಯ' ಪ್ರೇಮವು ದುರ್ವಾಸರ ಶಾಪ ಮತ್ತು ಉಂಗುರದ ಕಣ್ಣುಮುಚ್ಚಾಲೆಯಾಟಗಳಿಗೆ ಸಿಕ್ಕಿ ಶುದ್ಧಿಹೊಂದಿ ಚಕ್ರವರ್ತಿಲಕ್ಷಣೋಪೇತನಾದ ಪುತ್ರನ ಪ್ರಾಪ್ತಿಯಿಂದ ಜಗನ್ಮಂಗಳಕರವಾಗಿ 'ದಿವ್ಯ'ತೆಯನ್ನು ಪಡೆದ ಕಾರಣದಿಂದಲೇ ಪ್ರಣಯಿಗಳ ಪುನಸ್ಸಮಾಗಮವು ಇದಕ್ಕೆ ತಕ್ಕ ದಿವ್ಯವಾದ ಮಾರೀಚಾಶ್ರಮದ ಸನ್ನಿವೇಶದಲ್ಲೇ ನಡೆಯುವಂತೆ ಏರ್ಪಡಿಸಿರುವುದು ಮಹಾ ಕವಿಯ ರಚನಾ ಕೌಶಲ, ಪ್ರತಿಭೆ, ಔಚಿತ್ಯಜ್ಞಾನಗಳಿಗೆ ಕಲಶವಿಟ್ಟಂತಾಗಿದೆ. ಇದೇ ಶಾಕುಂತಲದಲ್ಲಿ ಅಭಿಜ್ಞ ವಿಮರ್ಶಕರು ಗುರುತಿಸಿರುವ ದಿವ್ಯಮರ್ತ್ಯಗಳ ಸಮಾಗಮ; ಮತ್ತೆಲ್ಲೂ ಕಾಣದ ಒಂದು ವೈಶಿಷ್ಟ್ಯ.

# ಅನುಬಂಧ

## ಸಂಸ್ಕೃತ ನಾಟ್ಯಶಾಸ್ತ್ರದ ಕೆಲವು ಪಾರಿಭಾಷಿಕ ಶಬ್ದಗಳು

1. ನಾಟಕಮ್—ಕವೇಃ ಕರ್ಮ (ಕವಿಯ ಕರ್ಮ) ಎಂದು ಸಾಮಾನ್ಯವಾಗಿ ವರ್ಣಿಸಲ್ಪಟ್ಟ ವಿಮರ್ಶಕರಿಂದ ಅನೇಕ ವಿಧವಾಗಿ ಲಕ್ಷಿತವಾದ 'ಕಾವ್ಯ'ವನ್ನು ದೃಶ್ಯ (ನೋಡಲು ಅರ್ಹವಾದದ್ದು) ಮತ್ತು ಶ್ರವ್ಯ (ಕೇಳಲು ಅರ್ಹವಾದದ್ದು) ಎಂದು ವಿಂಗಡಿಸಲಾಗಿದೆ. ಶ್ರವ್ಯ ಕಾವ್ಯವು ಗದ್ಯ, ಪದ್ಯ ಮತ್ತು ಮಿಶ್ರವೆಂದು ಮೂರು ವಿಧ. ಗದ್ಯವು ವೃತ್ತಗಂಧಿ, ಉತ್ಕಲಿಕಾಪ್ರಾಯ, ಕಥಾ ಮತ್ತು ಆಖ್ಯಾಯಿಕಾ ಎಂಬ ನಾಲ್ಕು ವಿಧಗಳನ್ನು ಒಳಗೊಂಡಿದೆ. ಪದ್ಯವು ಮಹಾಕಾವ್ಯ ಮತ್ತು ಖಂಡಕಾವ್ಯವೆಂದು ಎರಡು ವಿಧ.

ದೃಶ್ಯಕಾವ್ಯವನ್ನು ಹತ್ತು ರೂಪಕ ಮತ್ತು ಹದಿನೆಂಟು ಉಪರೂಪಕಗಳನ್ನಾಗಿ ವಿಂಗಡಿಸಲಾಗಿದೆ.

नाटकं[1] सप्रकरणं[2] भाणः[3] प्रहसनं[4] डिमः[5] ।
व्यायोग[6]समवकारौ[7] [8]वीथ्यङ्के[9]हामृगा [10]इति ॥

ಇವು ಹತ್ತು ರೂಪಕಗಳು.

नाटिका[1] त्रोटकं[2] गोष्ठी[3] सट्टकं[4] नाट्यरासकम्[5] ।
[6]प्रस्थानोल्लाप्य[7] काव्यानि[8] प्रेङ्खणं[9] रासकं[10] तथा ॥
संलापकं[11] श्रीगदितं[12] शिल्पकं[13] च विलासिका[14] ।
दुर्मल्लिका[15] प्रकरणी[16] हल्लीशो[17] [18]भाणिकेति च ॥
अष्टादश प्राहुरुपरूपकाणि मनीषिणः ।—साहित्यदर्पणः, 6. 4–6.

ಇವು ಹದಿನೆಂಟು ಉಪ ರೂಪಕಗಳು.

ಸಂಸ್ಕೃತ ನಾಟಕದ ಕೆಲವು ಮುಖ್ಯ ಲಕ್ಷಣಗಳನ್ನು ಒಳಗೊಂಡಿರುವ 'ಅಂಕ'ದ ಲಕ್ಷಣಗಳನ್ನು ಈ ರೀತಿ ಸಂಗ್ರಹಿಸಬಹುದು.

ರಸ ಮತ್ತು ಭಾವಗಳಿಂದ ಕೂಡಿ ಸುಂದರವಾಗಿರುವ ಅಂಕವು ಕಥೆಯನ್ನೋ ನಾಯಕನ ಸಾಹಸಗಳನ್ನೋ ಪ್ರತ್ಯಕ್ಷವಾದಂತೆ ಚಿತ್ರಿಸುತ್ತದೆ. ಪದಗಳ ಅರ್ಥಗಳು ನಿಗೂಢವಾಗಿರಕೂಡದು. ಕಥಾವಸ್ತುವಿನ ವಿವಿಧ ಎಳೆಗಳು ಮುಖ್ಯ ವಸ್ತುವನ್ನು ಬಲಗೊಳಿಸುವಂತೆ ಹೆಣೆಯಲ್ಪಟ್ಟು, ಅವುಗಳನ್ನು ಸೇರಿಸುವ ಅಂಶಗಳು ಸೂಕ್ಷ್ಮವಾಗಿ ಸೂಚಿಸಲ್ಪಟ್ಟಿರಬೇಕು. ಅಂಕವು ಅತಿ ಹೆಚ್ಚು ಘಟನೆಗಳಿಂದ ಕೂಡಿರಬಾರದು. ಕಥಾವಸ್ತುವಿನ ಬೀಜವನ್ನೂ ಪರಿಸಮಾಪ್ತಿಯ ಕಾರ್ಯವನ್ನೂ ಒಟ್ಟಿಗೆ ಸೇರಿಸ ಕೂಡದು. ಅಂಕವು ನಾನಾವಿಧವಾದ ನಾಟ್ಯವಿಧಾನಗಳಿಂದ ಕೂಡಿರ ಬೇಕು. ಪದ್ಯಗಳು ಹೆಚ್ಚಾಗಿರಬಾರದು. ಅಂಕದಲ್ಲಿ ಚಿತ್ರಿಸಲ್ಪಟ್ಟ ಘಟನೆಗಳು ಪರಸ್ಪರ

ವಿರುದ್ಧವಾಗಿರಕೂಡದು ಮತ್ತು ಅದರಲ್ಲಿನ ಕಥಾಂಶವು ಅನೇಕ ದಿನ ನಡೆವಂತಿರಬಾರದು. ನಾಯಕನು ಅಂಕದ ಕಥಾಂಶಕ್ಕೆ ಸಮೀಪದಲ್ಲಿರತಕ್ಕದ್ದು. ಮೂರು ಅಥವಾ ನಾಲ್ಕು ಪಾತ್ರಗಳು ಅದರಲ್ಲಿ ಭಾಗವಹಿಸತಕ್ಕದ್ದು. ದೂರದಿಂದ ಕರೆಯುವುದು, ಕೊಲೆ, ಯುದ್ಧ ; ರಾಜ್ಯ ಅಥವಾ ದೇಶಗಳ ವಿಪ್ಲವ, ಮದುವೆ, ಭೋಜನ, ಶಾಪ ಮತ್ತು ವಿಮೋಚನೆ, ಮರಣ, ಸಂಭೋಗ, ನಿದ್ರೆ, ಚುಂಬನ, ಸ್ನಾನ ಮತ್ತಿತರ ಜುಗುಪ್ಸಾವಹವಾದ ಘಟನೆಗಳನ್ನು ಅಂಕದಲ್ಲಿ ನಿರೂಪಿಸಕೂಡದು. ಅಂಕವು ಅತಿ ದೊಡ್ಡದಾಗಬಾರದು. ರಾಣಿ ಮತ್ತು ಅವಳ ಸೇವಕರು, ಮಂತ್ರಿ, ವರ್ತಕರು ಮೊದಲಾದವರ ವ್ಯವಹಾರಗಳನ್ನೊಳಗೊಂಡಿರಬೇಕು. ಅಂಕದ ಕೊನೆಯಲ್ಲಿ ಎಲ್ಲ ಪಾತ್ರಗಳೂ ಕಣ್ಮರೆಯಾಗತಕ್ಕದ್ದು.

ನान्दी: — ಸಂಸ್ಕೃತ ನಾಟಕವು ಸಾಮಾನ್ಯವಾಗಿ ದೇವತಾ ಪ್ರಾರ್ಥನೆಯ ರೂಪವಾದ ಮಂಗಳ ಶ್ಲೋಕದಿಂದ ಪ್ರಾರಂಭವಾಗುತ್ತದೆ. ಇದಕ್ಕೆ ನಾಂದಿಯೆಂದು ಹೆಸರು. ತೆರೆಯ ಹಿಂದೆ ನಟರಿಂದ ಆಚರಿಸಲ್ಪಡುತ್ತಿದ್ದ (ಭರತನ ನಾಟ್ಯ ಶಾಸ್ತ್ರಕ್ಕನುಸಾರ ಇಪ್ಪತ್ತೇಳುವಿಧವಾದ) "ಪೂರ್ವರಂಗಪ್ರಯೋಗದ" ಮುಖ್ಯವಾದ ಅಂಗವಾಗಿತ್ತು प्रत्याहारादिकान्यङ्गान्यस्य भूयांसि यद्यपि। तथाप्यवश्यं कर्तव्या नान्दी विघ्नोपशान्तये ॥ (ಸಾ. ದ. 6–23). ಹೀಗೆ (ನन्द् ಧಾತುವಿನಿಂದ ನಿಷ್ಪನ್ನವಾಗಿ नन्दन्ति अस्यां देवाः इति नान्दी ಎಂಬ ವ್ಯುತ್ಪತ್ತಿ ಹೊಂದಿದ) ನಾಂದಿಯು ದೇವತೆಗಳನ್ನು ಸಂತೋಷಗೊಳಿಸಿ ವಿಘ್ನಗಳನ್ನು ನಿವಾರಿಸಿ ನಾಟಕವನ್ನು ಯಶಸ್ವಿಯಾಗಿ ನಡೆಸುವುದಕ್ಕಾಗಿ ಆಚರಿಸಲ್ಪಡಬೇಕಾಗಿತ್ತು. 'नान्द्यन्ते ततः प्रविशति सूत्रधारः' ಎಂಬ ಮಾತಿನಿಂದ ಪ್ರಾರಂಭವಾಗುವ (ಭಾಸನವೆಂದು ಹೇಳಲಾಗಿರುವ (ಕೆಲವು ನಾಟಕಗಳಲ್ಲಿ, ಪೂರ್ವರಂಗದ ಅಂಗಭೂತವಾದ ನಾಂದಿಯು ಮುಗಿದಿದೆಯೆಂದು ಅರ್ಥ. ಕಾಲಕ್ರಮದಲ್ಲಿ ಈ ಮಂಗಲ ಶ್ಲೋಕಕ್ಕೂ ನಾಂದಿಯೆಂಬ ಹೆಸರು ಬಂದು ಇದನ್ನು ಪ್ರಸ್ತಾವನೆಯ ಅಂಗಭೂತವಾದ ನಾಂದಿಯೆಂದು ಕರೆಯಲಾಯಿತೆಂದು ತೋರುತ್ತದೆ. ಪ್ರಸ್ತಾವನಾಂಗಭೂತವಾದ ಈ ನಾಂದಿಯನ್ನು 'सूत्रधारः पठेन्नान्दीं मध्यमं स्वरमाश्रितः ಎಂಬ ನಿಯಮಾನುಸಾರ ಸೂತ್ರಧಾರನು ಹೇಳತಕ್ಕದ್ದು. ನಾಂದಿಯ ವಿಷಯ ಅಥವಾ ತಿರುಳನ್ನು (आशीर्नमस्क्रिया वस्तुनिर्देशान्यतमा स्मृता)—ಆಶೀರ್ವಾದ, ನಮಸ್ಕಾರ ಅಥವಾ ಕಥಾವಸ್ತುವಿನ ಸೂಚನೆ ಇವುಗಳಲ್ಲಿ ಒಂದೆಂದು ಹೇಳಲಾಗಿದೆ. ನಾಂದಿಯು (ಪ್ರಾಚೀನ ಪ್ರಕಾರ) ಎಂಟು ಅಥವಾ ಹನ್ನೆರಡು ಪಾದಗಳಿಂದ ಕೂಡಿರಬೇಕೆಂದಿದ್ದರೂ ಹದಿನೆಂಟು, ಇಪ್ಪತ್ತೆರಡು (ಮತ್ತು ಐವತ್ತಮೂರು) ಪಾದಗಳಿಗೂ ಅವಕಾಶವಿದೆ. (यत्राष्टभिर्द्वादशभिरष्टादशभिरेव वा। द्वात्रिंशत्या पदैर्वापि सा नान्दी परिकीर्तिता ॥ ಪದವೆಂದರೆ, ಸುಪ್ತಿಙನ್ತವಾದ ಪದ, ಶ್ಲೋಕದ ಕಾಲು ಭಾಗ ಶ್ಲೋಕಾರ್ಧ ಎಂದು ಮೊದಲಾಗಿ ಅನೇಕ ವಿಧವಾಗಿ ಅರ್ಥ ಹೇಳಲಾಗಿದೆ.

श्लोकपादं पदं केचित्सुप्तिङन्तमथापरे। परेऽवान्तरवाक्यं च पदमाहुर्विशारदाः) ನಾಂದಿಯು ವಸ್ತುನಿರ್ದೇಶರೂಪವಾದಾಗ ಭಾಸನ ನಾಟಕಗಳಲ್ಲಿನ ಮುದ್ರಾಲಂಕಾರದ ನಿದರ್ಶಗಳನ್ನೊಳಗೊಂಡು 'अर्थतः शब्दतो वापि मनाक्काव्यार्थसूचनम्' ಎಂಬ ವಚನಕ್ಕೆ ತಕ್ಕಂತೆ ಅರ್ಥದ ಮೂಲಕವಾಗಲೀ ಶಬ್ದದ ಮೂಲಕವಾಗಲೀ ಕಾವ್ಯಾರ್ಥವನ್ನು ಸೂಕ್ಷ್ಮವಾಗಿ ಸೂಚಿಸುವಂತಿರಬೇಕು.

4. सूत्रधारः — ಲಕ್ಷಣಕಾರರು ಸೂತ್ರಧಾರನ ಲಕ್ಷಣಗಳನ್ನು ನಾನಾ ವಿಧವಾಗಿ ಹೇಳಿರುತ್ತಾರೆ. सूत्रं धारयतीति सूत्रधारः — ಎಂಬ ನಿಷ್ಪತ್ತಿಗೆ ಅನುಗುಣವಾಗಿ ನಾಟಕದ ಕಥಾಸೂತ್ರಗಳನ್ನು ಧರಿಸಿರುವವನು ಎಂದರ್ಥ. ಸೂತ್ರವೆಂದರೆ ನಾಟ್ಯಕ್ಕೆ ಆವಶ್ಯಕವಾದ ಸಲಕರಣೆಗಳೆಂದು ಅರ್ಥ. ಸೂತ್ರಧಾರನ ಉಳಿದ ಕರ್ತವ್ಯವನ್ನು ಈ ರೀತಿ ನಿರೂಪಿಸಿದೆ.

ನಾಯಕನ, ಕವಿಯ ಮತ್ತು ಕಥಾವಸ್ತುವಿನ ಗುಣಗಳನ್ನೆಲ್ಲ ಒಟ್ಟುಗೂಡಿಸಿ ಜೋಡಿಸುವವನು; ರಂಗಮಂಟಪದ ಅಲಂಕಾರದಲ್ಲಿ ನಿಪುಣ; ರಂಗಭೂಮಿಯ ಅಧಿದೇವತೆಯ ಪೂಜೆಯನ್ನು ನಡೆಸುವವನು ಮತ್ತು ಮೊಟ್ಟಮೊದಲು ಕಥಾವಸ್ತುವನ್ನು ಸೂಚಿಸುವವನು ಸೂತ್ರಧಾರ.

5. नेपथ्यम् (नैपथ्यम्): — ನಟರು ಉಡುಪನ್ನು ಧರಿಸುವ ಕೊಠಡಿ. (कुशीलवकुटुम्बस्य स्थली नैपथ्यमिष्यते); ಇದು ಸಾಮಾನ್ಯವಾಗಿ ರಂಗಸ್ಥಳದ ತೆರೆಯ ಹಿಂದೆ ಇರತಕ್ಕದ್ದಾಗಿತ್ತು. नेपथ्यम् ಎಂದರೆ ನಟರ ಉಡುಪೆಂದೂ (आकल्पवेषो नेपथ्यं प्रतिकर्म प्रसाधनम् ಅಮರ) ಸಾಮಾನ್ಯವಾದ ಅಲಂಕಾರವೆಂದೂ, ತೆರೆ ಅಥವಾ ಪರದೆಯೆಂಬ ಅರ್ಥವೂ ಇದೆ. (नेपथ्यं स्याज्जवनिका रङ्गभूमिः प्रसाधनम् ಅಜಯ).

6. प्रस्तावना—ನಾಟಕದ ಮೊದಲಲ್ಲಿ ನಟ, ವಿದೂಷಕ, ಅಥವಾ ಪಾರಿಪಾರ್ಶ್ವಕರು ಸೂತ್ರಧಾರರೊಡನೆ ಚಮತ್ಕಾರವಾಗಿ ಮಾತನಾಡುತ್ತಾ ಪ್ರೇಕ್ಷಕರಿಗೆ ನಾಟಕದ ಪರಿಚಯವನ್ನು ಮಾಡಿಸುವ ದೃಶ್ಯ.

ಪ್ರಸ್ತಾವನೆಯು : (1) ಉದ್ಘಾತಕ (2) ಕಥೋದ್ಘಾತ (3) ಪ್ರಯೋಗಾತಿಶಯ (4) ಪ್ರವರ್ತಕ ಮತ್ತು (5) ಅವಗದಿತ ಎಂದು ಐದು ವಿಧ. ಕ್ರಮವಾಗಿ (1) ಮುದ್ರಾರಾಕ್ಷಸ (2) ರತ್ನಾವಳೀ (ಕೆಲವು ಭಾಸನ ನಾಟಕಗಳು) (3) ನಾಗಾನಂದ ಮತ್ತು ಕುಂದಮಾಲಾ (4) ಅನರ್ಘರಾಘವ ಮತ್ತು (5) ಶಾಕುಂತಲ ಈ ನಾಟಕಗಳಲ್ಲಿ ಕಂಡುಬರುತ್ತವೆ.

7. नायकः—ನಾಯಕನ ಲಕ್ಷಣ ಈ ರೀತಿ ಇದೆ—

त्यागी कृती कुलीनः सुश्रीको रूपयौवनोत्साही ।
दक्षोऽनुरक्तलोकस्तेजोवैदग्ध्यशीलवान्नेता ॥ (सा. द., 3.30)

ನಾಯಕನು ತ್ಯಾಗಶೀಲನೂ, ಸಮರ್ಥನೂ, ಸದ್ವಂಶದಲ್ಲಿ ಜನಿಸಿದವನೂ, ಐಶ್ವರ್ಯವಂತನೂ, ರೂಪ ಯೌವನ ಮತ್ತು ಉತ್ಸಾಹಗಳಿಂದ ಕೂಡಿದವನೂ ಆಗಿರಬೇಕು. ದಕ್ಷನೂ, ಲೋಕಾನುರಕ್ತನೂ ಆಗಿ ತೇಜಸ್ಸು, ವೈದಗ್ಧ್ಯ ಮತ್ತು ಶೀಲಗಳಿಂದಲೂ ಕೂಡಿರಬೇಕು. ನಾಯಕರು ನಾಲ್ಕು ವಿಧ. ಶ್ರೀರಾಮ ಯುಧಿಷ್ಠಿರರಂತೆ ಧೀರೋದಾತ್ತರು; ಭೀಮಸೇನನಂತೆ ಧೀರೋದ್ಧತ; ವತ್ಸರಾಜನಂತೆ ಧೀರಲಲಿತ ಮತ್ತು ಮಾಲತೀ ಮಾಧವದಲ್ಲಿನ ಮಾಧವನಂತೆ ಧೀರಶಾಂತ. ಈ ನಾಲ್ಕು ವಿಧಗಳಲ್ಲಿ ಒಂದೊಂದನ್ನೂ ನಾಲ್ಕು ವಿಧಗಳಾಗಿ ವಿಂಗಡಿಸಿ, ಒಟ್ಟು ಹದಿನಾರು ವಿಧಗಳಾಗುತ್ತವೆ.

8. नायिका—ನಾಯಕನ ಗುಣಗಳನ್ನೇ ಉಳ್ಳ ನಾಯಿಕೆಯರನ್ನು ಮೂರು ವಿಧಗಳಾಗಿ ವಿಂಗಡಿಸಲಾಗಿದೆ.

अथ नायिका त्रिभेदा स्वान्या साधारणा स्त्रीति ।
नायकसामान्यगुणैर्भवति यथासंभवैर्युक्ता ॥ (सा. द. 3.56)

ಇವರುಗಳಲ್ಲಿ 'ಸ್ವೀಯಾ' ನಾಯಿಕೆಯರನ್ನು ಮುಗ್ಧಾ ಮಧ್ಯಾ ಮತ್ತು ಪ್ರಗಲ್ಭಾ ಎಂದು ಮೂರು ವಿಧಗಳಾಗಿ ವಿಂಗಡಿಸಿ, ಒಂದೊಂದು ವಿಧವನ್ನೂ ಪುನರ್ವಿಂಗಡಿಸಲಾಗಿದೆ. 'ಪರಕೀಯಾ' ನಾಯಿಕೆ ಪರೋಢಾ ಕನ್ಯಕಾ ಎಂದು ಮುಖ್ಯವಾಗಿ ಎರಡು ವಿಧವಾಗಿ ವಿಂಗಡಿಸಲ್ಪಟ್ಟು ಮತ್ತೆ ಅನೇಕ ಪ್ರಭೇದಗಳನ್ನು ಹೊಂದಿದೆ. 'ಸಾಧಾರಣಾ ಸ್ತ್ರೀ' ಎಂಬ ಮೂರನೆಯ ವಿಧದ, ಧೀರಾ, ಕಲಾ ಪ್ರಗಲ್ಭಾ ಮತ್ತು ವೇಶ್ಯಾ ಎಂಬ ಮೂರು ಮುಖ್ಯ ಭೇದಗಳು ಅನೇಕ ಪ್ರಭೇದಗಳನ್ನು ಹೊಂದಿವೆ.

9. आत्मगतम्; प्रकाशम्:—सर्वश्राव्यं प्रकाशं स्यादश्राव्यं स्वगतं मतम् । ('ದಶರೂಪಕ' I) ಅಶ್ರಾವ್ಯವೆಂದರೆ ರಂಗಭೂಮಿಯ ಇತರ ಪಾತ್ರಗಳಿಗೆ ಕೇಳದೆ ಇರುವ ಮಾತೆಂದು ಭಾವಿಸತಕ್ಕದ್ದು.

10. प्रवेशकः
11. विष्कम्भकः
12. मिश्रविष्कम्भकः

} ಎರಡು ಅಂಕಗಳ ಮಧ್ಯದಲ್ಲಿ ನಡೆದ ಘಟನೆಗಳನ್ನೋ ಅಥವಾ ಮುಂದೆ ನಡೆಯಬಹುದಾದ ಕಥಾಂಶವನ್ನೋ ಸೂಚಿಸುವ ಮೂರು ವಿಧವಾದ ದೃಶ್ಯಗಳು. ಇವು ಮೊದಲನೆಯ ಅಂಕದ ಪ್ರಾರಂಭದಲ್ಲೂ ಕೊನೆಯ ಅಂಕದ ಅಂತ್ಯದಲ್ಲೂ ಬರುವುದಿಲ್ಲ ದೃಶ್ಯದಲ್ಲಿ ಭಾಗವಹಿಸುವ ಪಾತ್ರಗಳು ಪ್ರಾಕೃತವನ್ನಾಡುವ ಚೇಟೀ, ವಿದೂಷಕ ಮೊದಲಾದ ನೀಚ ಪಾತ್ರಗಳಾದಲ್ಲಿ ಇದಕ್ಕೆ ಪ್ರವೇಶಕವೆಂದು ಹೆಸರು. ಸಂಸ್ಕೃತವನ್ನು ಮಾತನಾಡುವ ಉತ್ತಮ ಅಥವಾ ಮಧ್ಯಮ ಪಾತ್ರಗಳು ಭಾಗವಹಿಸಿದರೆ ಆ ದೃಶ್ಯಕ್ಕೆ

ವಿಷ್ಕಂಭಕವೆಂದು ಹೆಸರು. ಮಿಶ್ರ ವಿಷ್ಕಂಭಕದಲ್ಲಿ ಎರಡು ಬಗೆಯ ಪಾತ್ರಗಳೂ ಭಾಗವಹಿಸುತ್ತಾರೆ.

13. विटः—ರಾಜಕುಮಾರನ ಅಥವಾ ವೇಶ್ಯೆಯ ಜೊತೆಗಾರ, ಲಂಪಟ ಯುವಕ, ಸಂಗೀತ, ಪದ್ಯ ಕಾವ್ಯ ಮತ್ತಿತರ ಕಲೆಗಳನ್ನು ಸ್ವಲ್ಪಮಟ್ಟಿಗೆ ತಿಳಿದವನು ಮತ್ತು ಸಹಚರನ ಉಪಜೀವಿ. "वेश्यानागरकयोः परस्परं सन्देशं वेटतीति विटः"। ಎಂದು ವಿಟ ಶಬ್ದದ ವ್ಯುತ್ಪತ್ತಿಯಿದೆ.

संभोगहीनसंपद्विटस्तु धूर्तः कलैकदेशज्ञः।
वेशोपचारकुशलो वाग्मी मधुरोऽथ बहुमतो गोष्ठयाम् ॥

14. चेटः—ಸೇವಕ. चेटी—ಸೇವಕಿ प्रतीहारी—ದ್ವಾರಪಾಲಕಿ.

15. विदूषकः — ಹಾಸ್ಯಗಾರ; ಅನೇಕ ವೇಳೆ ವೇಷ, ಭೂಷಣ ಸ್ವಭಾವಗಳ ಕಾರಣ ಅಪಹಾಸ್ಯಕ್ಕೆ ಈಡಾಗುವ ವ್ಯಕ್ತಿ. ದೊರೆಯ ಆಪ್ತಮಿತ್ರ ಮತ್ತು ಶೃಂಗಾರ ವ್ಯಾಪಾರಗಳಲ್ಲಿ ಆಪ್ತಸಹಾಯಕ.

शृङ्गारेऽस्य विटचेटविदूषकाद्याः स्युः।
भक्ता नर्मसु निपुणाः कुपितवधूमानभञ्जकाः सहायशुद्धाः॥
कुसुमवसन्ताद्यभिधः कर्मवपुर्वेशभाषाद्यैः।
हास्यकरः कलहरतिर्विदूषकः स्यात्स्वकर्मज्ञः॥ (सा. दा., 3.40, 42)
एकविद्यो विटश्चान्यो हासकृच्च विदूषकः।
विकृताङ्गवचोवेशैर्हास्यकारी विदूषकः॥ (दशरूपकम्)

16. पताकास्थानकम्—ನಾಟಕದಲ್ಲಿ ಬರುವ ಉಪಕಥಾರೂಪವಾದ ಘಟನೆ. ಕೆಲವು ವೇಳೆ ಮುಂದೇನಾಗುವುದೆಂಬುದನ್ನು ಸೂಚಿಸಬಹುದು. ನಿರೀಕ್ಷಿಸಲ್ಪಟ್ಟ ಅಥವಾ ಆಲೋಚಿಸಲ್ಪಟ್ಟ ಸಂದರ್ಭಕ್ಕೆ ಬದಲಾಗಿ ಅನಿರೀಕ್ಷಿತವಾದ ಆಕಸ್ಮಿಕವಾದ ಮತ್ತೊಂದು ಸನ್ನಿವೇಶ ಉಂಟಾಗುತ್ತದೆ.

यत्रार्थे चिन्तितेऽन्यस्मिंस्तल्लिङ्गोऽन्यः प्रयुज्यते।
आगन्तुकेन भावेन पताकास्थानकं तु तत्॥ (सा. द., 6.45)

ಪತಾಕಾಸ್ಥಾನಕವು ಸಾ.ದ. 6–46 ರಿಂದ 49ರಲ್ಲಿ ಹೇಳಿರುವಂತೆ ನಾಲ್ಕು ವಿಧ.

17. कञ्चुकी काञ्चुकीयः—ಕಂಚುಕವೆಂಬ ವಿಶೇಷ ಉಡುಪನ್ನು ಧರಿಸಿದ ಅಂತಃಪುರದ ವ್ಯವಹಾರಗಳನ್ನು ತಿಳಿದ ನೌಕರ. ಪ್ರಾಯಶಃ ವೃದ್ಧ ಬ್ರಾಹ್ಮಣ. ದೊರೆಯ ಸಮೀಪವರ್ತಿ. कञ्चुकम् अस्य अस्ति इति कञ्चुकी.

अन्तःपुरचरो वृद्धो विप्रो गुणगणान्वितः।
सर्वकार्यार्थकुशलः कञ्चुकीत्यभिधीयते॥
जरावैक्लव्ययुक्तेन विशेद्गात्रेण कञ्चुकी। (नाट्यशास्त्रम्)

18. अपवारितम् ಅಥವಾ जनान्तिकम्:—ಮರೆಯಲ್ಲಿ. (ನಾಟಕದಲ್ಲಿ ತ್ರಿಪತಾಕಾ ಎಂಬ ಹಸ್ತಾಭಿನಯದಿಂದ ಸೂಚಿತವಾಗುತ್ತದೆ).

त्रिपताकाकरेणान्यानपवार्यान्तरा कथाम्।
अन्योन्यामान्त्रणं यत्स्यात्तज्जनान्ते जनान्तिकम्॥ (सा॰ द., 6.139)

19. भरतवाक्यम् — ನಾಟಕದ ಕೊನೆಯಲ್ಲಿ ಎಲ್ಲರಿಗೂ ಪುರೋಭಿವೃದ್ಧಿಯನ್ನು ಬಯಸುವ ಶುಭಾಶಂಸನ. ಭರತ ಎಂದರೆ ನಟ. ಅವನಿಂದ ಅಥವಾ ಗುಂಪಾಗಿ ಎಲ್ಲ ನಟರಿಂದ ಹೇಳಲ್ಪಡುತ್ತಿದ್ದಂತೆ ತೋರುತ್ತದೆ. भरतस्य वाक्यं भरतवाक्यम्। ನಾಟ್ಯಾಚಾರ್ಯ ಭರತನಿಗೆ ಗೌರವವನ್ನು ಸೂಚಿಸುವ ವಾಕ್ಯವೆಂದೂ ಹೇಳುತ್ತಾರೆ. ಸಾಮಾನ್ಯವಾಗಿ ಭರತವಾಕ್ಯವು ಮಳೆ ಬೆಳೆಗಳ ಸಮೃದ್ಧಿಯನ್ನು ಕೋರುತ್ತದೆ.

20. ನಾಟಕದಲ್ಲಿ ಭಾಷೆಗಳ ಪ್ರಯೋಗ :— ಸಂಸ್ಕೃತ ನಾಟಕದಲ್ಲಿ ಬರುವ ಪಾತ್ರಗಳನ್ನು ಉತ್ತಮ, ಮಧ್ಯಮ, ಅಧಮ ಎಂದು ಮೂರು ವಿಧವಾಗಿ ವಿಂಗಡಿಸಿರುತ್ತಾರೆ.

पुरुषाणामनीचानां संस्कृतं स्यात्कृतात्मनाम्।
शौरसेनी प्रयोक्तव्या तादृशीनां च योषिताम्॥ इत्यादिः
(सा. द., 6. 158 to 160)

ಅಧಮ ಪಾತ್ರಗಳಾದ ಚೇಟ, ಶಕಾರ ಮೊದಲಾದವರೂ, ಸ್ತ್ರೀಯರೂ, ವಿದೂಷಕನೂ ಪ್ರಾಕೃತ ಭಾಷೆಯಲ್ಲಿ ಮಾತನಾಡುತ್ತಾರೆ. ಉತ್ತಮ ಪಾತ್ರಗಳು ಸಂಸ್ಕೃತವನ್ನೇ ಆಡುತ್ತಾರೆ. ಈ ವ್ಯವಸ್ಥೆ ಕೆಲವು ವೇಳೆ ಹೇಳುವ ವಿಷಯಕ್ಕೆ ತಕ್ಕಂತೆ ಬದಲಾವಣೆ ಹೊಂದುತ್ತದೆ. ಯಾವ ಯಾವ ಪಾತ್ರಗಳು ಯಾವ ಯಾವ ವಿಧವಾದ ಪ್ರಾಕೃತವನ್ನು ಬಳಸಬೇಕೆಂಬುದಕ್ಕೆ ಭರತನು ನಿರ್ದೇಶನ ಕೊಟ್ಟಿದ್ದಾನೆ.

उत्तमाः पीठमर्दाद्याः मध्यमौ विटविदूषकौ।
तथा शकारश्चेटाद्या अधमाः परिकीर्तिताः॥ (सा. द., 3.46)

ಪ್ರಚಾರದಲ್ಲಿದ್ದ ಭಾಷೆಗಳನ್ನು ರುದ್ರಟನು ಈ ರೀತಿ ಹೇಳಿರುತ್ತಾನೆ—

प्राकृतसंस्कृतमागधपिशाचभाषाश्च शूरसेनी च।
षष्ठोऽत्र भूरिभेदो देशविशेषादपभ्रंशः॥

ಭರತನು ಅವುಗಳನ್ನು ಈ ರೀತಿ ಹೆಸರಿಸಿದ್ದಾನೆ—

मागध्यवन्तिजा प्राच्या शूरसेन्यर्धमागधी।
बाह्लीका दाक्षिणात्या च सप्त भाषाः प्रकीर्तिताः॥

